# ಭಂಡಾರ : ಒಂದು ಸಾಂಸ್ಕೃತಿಕ ಅಧ್ಯಯನ

(೨೦೧೬-೧೭ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)



ನೋಂದಣಿ ಸಂಖ್ಯೆ: ೧೬೦೧೦೫೦೩೦೦೧೪



ಭಾಷಾನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ-೫೮೩ ೨೭೬

೨೦೧೬-೨೦೧೭

# ಭಂಡಾರ : ಒಂದು ಸಾಂಸ್ಕೃತಿಕ ಅಧ್ಯಯನ

(೨೦೧೬-೧೭ನೆಯ ಸಾಲಿನ ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಸಂಪ್ರಬಂಧ)



ನೋಂದಣಿ ಸಂಖ್ಯೆ : ೧೬೦೧೦೫೦೩೦೦೧೮



ಭಾಷಾನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೧೬-೧೭

# ಭಂಡಾರ : ಒಂದು ಸಾಂಸ್ಕೃತಿಕ ಅಧ್ಯಯನ

## ಪರಿವಿಡಿ

## ಅಧ್ಯಾಯ – ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

**ಪ್ರಸ್ತಾವನೆ :**

ಭಾರತೀಯಜನಾಂಗದಲ್ಲಿ ಪಶುಪಾಲನ ಜನಾಂಗವೆಂದು ಕರೆಯುವ ಕುರುಬರ ಜನಾಂಗದವರನ್ನು ಹಾಲುಮತಸ್ಥ ಸಮುದಾಯ ಎನ್ನಲಾಗಿದೆ. ಹಾಲುಮತ ಸಮುದಾಯ ಪ್ರಾಚೀನ ಮತ್ತು ಸಾಂಸ್ಕೃತಿಕ ಪರಂಪರೆಯಲ್ಲಿ ಬಹುದೊಡ್ಡ ನೆಲೆಯನ್ನು ಒಳಗೊಂಡಿದೆ. ಕುರುಬರ ಬದುಕಿನಲ್ಲಿ 'ಭಂಡಾರ' ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕವಾಗಿ ಮಹತ್ವದ ಪಾತ್ರವಹಿಸುತ್ತದೆ. ಪಶುಪಾಲಕರಾದ ಕುರುಬ ಜನಾಂಗದ ಆರಾಧ್ಯದೈವಗಳ ಆಚರಣೆ ಮತ್ತು ಸಂಪ್ರದಾಯದಲ್ಲಿ 'ಭಂಡಾರ'ವು ಪ್ರಾಚೀನ ಕಾಲದಿಂದ ಮುಂದಿನ ಪೀಳಿಗೆಯ ಜನಸಮುದಾಯದವರೆಗೆ ಮಾದರಿಯಂತೆ 'ಭಂಡಾರ' ಸಂಸ್ಕೃತಿ' ಇಂದಿಗೂ ಮಹತ್ವಪೂರ್ಣವಾಗಿದೆ. ಈ ಹಿನ್ನೆಲೆಯಲ್ಲಿ ಭಂಡಾರ ಸಂಸ್ಕೃತಿಯು ಕುರುಬರ ಸಮುದಾಯಕ್ಕೆ ಮಾತ್ರ ಸೀಮಿತವಾಗಿರದೆ, ಅನ್ಯಸಮುದಾಯದವರಿಗೂ ಭಾವನಾತ್ಮಕವಾದ ಸಂಬಂಧವನ್ನು ಒಳಗೊಂಡಿರುವುದು ಆಶ್ಚರ್ಯವೆನಿಸುತ್ತದೆ. ಈ ರೀತಿಯಾದ ಭಂಡಾರ ಸಂಸ್ಕೃತಿ ಸಂಪ್ರದಾಯ, ಆಚರಣೆ, ನಂಬಿಕೆಗಳನ್ನು ಹಾಗೂ ಭಂಡಾರ ಸಂಸ್ಕ್ಕೃತಿಯ ಸಾಂಸ್ಕ್ಕೃತಿಕ ಮಹತ್ವವನ್ನು ಕುರಿತು ಅಧ್ಯಯನ ಮಾಡುವುದೇ ಈ ನಿಬಂಧದ ಉದ್ದೇಶವಾಗಿದೆ.

ಹಾಲುಮತ ಸಮುದಾಯವು ತನ್ನನ್ನು ಭಂಡಾರ ಸಂಸ್ಕೃತಿ ನಂತರ ವಿಭೂತಿ ಸಂಸ್ಕೃತಿಗೆ ಒಪ್ಪಿಕೊಂಡಿದೆ. ಪ್ರಸ್ತುತ ಸಂಪ್ರಬಂಧವು ಹಾಲುಮತ ಜನಾಂಗದ ಭಂಡಾರ ಸಂಸ್ಕೃತಿಯನ್ನು ಮಾತ್ರ ವಿಶ್ಲೇಷಿಸುವುದು ಸಂಪ್ರಬಂಧದ ಉದ್ದೇಶವಾಗಿದೆ. ಭಂಡಾರ ಕೇವಲ ಅರಿಶಿಣ ಪುಡಿ ಆಗಿರದೇ ಜನಪದರ ಬದುಕಿನ ರೀತಿ–ನೀತಿ, ಆಚರಣೆ–ಸಂಪ್ರದಾಯ ಹಾಗೂ ನಂಬಿಕೆಗಳಲ್ಲಿ ಧಾರ್ಮಿಕ ಕ್ರಿಯಾಚರಣೆಯಾಗಿದ್ದು, ಸಾಂಕೇತಿಕವಾದ ವೈವಿಧ್ಯತೆಯಲ್ಲಿ, ಭಾವನಾತ್ಮಕವಾದ ಸಂಬಂಧಗಳನ್ನು ಒಳಗೊಂಡಿದ್ದು ಅಲ್ಲದೇ ಸರ್ವಧರ್ಮ ಸಮನ್ವಯವಾದ ಇದರ ವ್ಯಾಪ್ತಿ

ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರಗಳವರೆಗೂ ವಿಸ್ತಾರವಾದ ವ್ಯಾಪ್ತಿಯನ್ನು ಒಳಗೊಂಡಿದೆ. ಭಂಡಾರದ ಸಾಂಸ್ಕೃತಿಕ ನೆಲೆಯನ್ನು ಕುರಿತು ಅಧ್ಯಯನ ಮಾಡುವುದು ಈ ಅಧ್ಯಯನದ ಆಶಯವಾಗಿದೆ.

ಭಂಡಾರ ಸಂಸ್ಕೃತಿಯು ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನೆಲೆಯಲ್ಲಿ ನೋಡುವುದಾದರೆ ಮಹತ್ವಪೂರ್ಣವಾಗಿದೆ.

ಪ್ರಸ್ತುತ ಅಧ್ಯಯನವು ಐದು ಅಧ್ಯಾಯಗಳಲ್ಲಿ ವ್ಯಾಪಿಸಿದೆ. 'ಭಂಡಾರ' ಕಾಡಿನ ಸಂಸ್ಕೃತಿಯಿಂದ ನಾಡಿನ ಸಂಸ್ಕೃತಿಯಾಗಿ ಪರಿವರ್ತಿಸುತ್ತಿರುವ ಆಚರಣೆಗಳಾಗಿವೆ. ನಿರ್ದಿಷ್ಟ ಸಂದರ್ಭದಲ್ಲಿ ನಡೆಯುವ ಭಂಡಾರ ಆಚರಣೆ, ಸಂಪ್ರದಾಯಗಳು ಒಂದು ಕುತೂಹಲವನ್ನುಂಟು ಮಾಡುವುದಲ್ಲದೇ ಇಂತಹ ಭಂಡಾರ ಸಂಸ್ಕೃತಿಯು ಜನಪದರ ಜೀವನದಲ್ಲಿ ಹರಡಿಕೊಂಡಿರುವ ವ್ಯಾಪ್ತಿ ಬಹಳ ದೊಡ್ಡದು. ಜನಸಾಮಾನ್ಯರ ಆರಾಧ್ಯದೈವಗಳ ಪೂಜೆ, ಆಚರಣೆ, ಸಂಪ್ರದಾಯದಿಂದ ಹಿಡಿದು ಮಂಗಳ ಕಾರ್ಯದವರೆಗೂ ಇದರ ವ್ಯಾಪ್ತಿ ಹರಡಿದೆ. ಭಂಡಾರದ ಉಪಯೋಗ, ಜನಪದರು ಅದರ ಮೇಲೆ ಇರಿಸಿಕೊಂಡ ನಂಬಿಕೆ, ಭಕ್ತಿ-ಭಾವನೆಯನ್ನು ನೋಡುವುದಾದರೆ ತುಂಬ ಆಶ್ಚರ್ಯವಾದ ಸಂಗತಿಯಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭಂಡಾರ ಎಂದರೇನು? ಅದನ್ನು ಕುರಿತಾದ ವ್ಯಾಖ್ಯೆಗಳನ್ನು ವಿವರಿಸಿ ನಂತರ ಭಂಡಾರ ಕುರಿತಾದ ಉಲ್ಲೇಖಗಳನ್ನು ಪ್ರಸ್ತಾಪಿಸಲಾಗಿದೆ. ಅರ್ಥ, ವ್ಯಾಖ್ಯೆ, ಉಲ್ಲೇಖಗಳು ಒಂದು ರೀತಿಯಲ್ಲಿ ಭಂಡಾರದ ಪ್ರಾಚೀನತೆಯನ್ನು ಹೇಳುತ್ತದೆ. ಚಾರಿತ್ರಿಕ ಬೆಳವಣಿಗೆಯ ಹಂತಗಳನ್ನು ದಾಟಿ ಬಂದು ಆಚರಣೆಯ ಮುಖಾಂತರ ತನ್ನ ಸ್ವರೂಪದಲ್ಲಿಯೇ ಮುಂದುವರೆದಿದೆ ಈ ಭಂಡಾರ ಸಂಸ್ಕೃತಿ. ಪುರಾಣಗಳು, ಐತಿಹಾಸಿಕ ವಿಷಯಗಳು ಇವೆಲ್ಲಾ ಭಂಡಾರದ ಪ್ರಾಚೀನತೆಯನ್ನು ವ್ಯಕ್ತಪಡಿಸುತ್ತದೆ. ಪಶುಪಾಲಕರಾದ ಕುರುಬರ ಆರಾಧ್ಯದೈವಗಳ ಪೂಜೆಗಳಿಗೆ ಮತ್ತು ತಮ್ಮ ನಿತ್ಯದ ಕಾರ್ಯಗಳಿಗೂ ಭಂಡಾರವನ್ನು ಶ್ರದ್ಧಾ-ಭಕ್ತಿಯಿಂದ ಉಪಯೋಗಿಸಬೇಕು ಎಂದು ಅವರು ಭಾವಿಸಿದ್ದಾರೆ.

ಕುರುಬರ ಭಕ್ತಿ-ಭಾವನೆಗಳ ಬಗೆಗಿನ ಐತಿಹ್ಯ, ಕತೆಗಳು, ಭಂಡಾರದ ಸಿದ್ಧತೆ ಮತ್ತು ಅದರ ಉಪಯೋಗ ಮುಂತಾದವು ಸೇರ್ಪಡೆಗೊಳ್ಳುತ್ತವೆ. ಇಂದಿನ ಭಂಡಾರ ಸಿದ್ಧತೆಯ ಈಗಿನ ಬೆಳವಣಿಗೆಯಲ್ಲಿ ಅದು ಪ್ರಾಚೀನ ಕಾಲದ ಇತಿಹಾಸವಿದೆ. ಈ ಭಂಡಾರ ಸಿದ್ಧತೆಯನ್ನು ಅರ್ಥೈಸಿಕೊಳ್ಳಲು ಪ್ರಾಚೀನತೆ ಸಹಕಾರಿಯಾಗಿದೆ. ಈ ಉಲ್ಲೇಖಗಳು ಆನುಷಂಗಿಕವಾಗಿ ಸಾಮಾಜಿಕ, ಧಾರ್ಮಿಕ ಆಚರಣೆಗಳ ಬಗ್ಗೆ ವಿಷಯವನ್ನು ಸಂಗ್ರಹಿಸಿಕೊಡುವುದರಿಂದ ಅಧ್ಯಯನದ ವ್ಯಾಪ್ತಿಯಲ್ಲಿ

ಇವುಗಳಿಗೆ ತನ್ನದೇ ಆದ ಮಹತ್ವವಿದೆ. ಭಂಡಾರದ ಉಲ್ಲೇಖಗಳು ಕ್ರಮೇಣವಾಗಿ ಮೊದಲು ಪುರಾಣಗಳು, ಎರಡನೆಯದು ಐತಿಹಾಸಿಕ ಹಾಗೂ ಜನಪದ ಸಾಹಿತ್ಯ. ಈ ರೀತಿ ಹಂತಹಂತವಾಗಿ ಭಂಡಾರದ ಅಸ್ತಿತ್ವವನ್ನು ಗುರುತಿಸುವಂತದ್ದಾಗಿದೆ. ಇದರಿಂದ ಭಂಡಾರದ ಅರ್ಥ, ಉಲ್ಲೇಖಗಳನ್ನು ಸ್ಪಷ್ಟವಾಗಿ ತಿಳಿಯಬಹುದಾಗಿದೆ. ಭಂಡಾರದ ಉಲ್ಲೇಖಗಳಲ್ಲಿ ಜನಪದ ಹಾಲುಮತ ಮಹಾಕಾವ್ಯ, ಮೈಲಾರಲಿಂಗನ ಕಾವ್ಯ, ತಗರ ಪವಾಡ, ನೇಗಿನಹಾಳ ಪ್ರಬಂಧಗಳು, ಹಾಲುಮತ ವ್ಯಾಸಂಗ, ಮೈಲಾರ ಮತ್ತು ಖಂಡೋಬ ಕೃತಿಗಳು ಇವುಗಳನ್ನು ಪ್ರಾದೇಶಿಕ ನೆಲೆಯಲ್ಲಿ ಭಂಡಾರ ಸಂಸ್ಕೃತಿಯನ್ನು ವಿವೇಚಿಸಲಾಗಿದೆ.

ಮೂರನೆಯ ಅಧ್ಯಾಯ ಪ್ರಬಂಧದ ಪ್ರಮುಖವಾದ ಭಾಗವಾಗಿದೆ. ಸಂಪ್ರದಾಯ, ಆಚರಣೆ, ನಂಬಿಕೆಗಳಲ್ಲಿ ಭಂಡಾರದ ಪಾತ್ರವನ್ನು ತಿಳಿಯಬಹುದಾಗಿದೆ. ಜನಪದ ಶುಭಕಾರ್ಯದಲ್ಲಿ ಇಷ್ಟದೈವಗಳ ಆರಾಧನೆಗಳಲ್ಲಿ ಭಂಡಾರದ ಸ್ಥಾನ ತುಂಬ ಮಹತ್ವವಾದುದ್ದಾಗಿದೆ. ಮದುವೆ, ಆರಾಧ್ಯದೈವಗಳ ಜಾತ್ರೆ, ಉತ್ಸವಗಳಲ್ಲಿ ಭಂಡಾರವಿರದೆ ಕಾರ್ಯಕ್ರಮಗಳು ನಡೆಯುವುದಿಲ್ಲ. ಎಲ್ಲ ಜನಪದರ ದೈವಗಳು ಜನಪರ ಸಂಸ್ಕೃತಿಯ ಪ್ರತೀಕವಾಗಿದ್ದು ಮತ್ತು ಪ್ರತಿಪಾದಕರಾಗಿದ್ದಾರೆ. ಇಂತಹ ಸಂಸ್ಕೃತಿಯಲ್ಲಿ ಜನಪದ ದೈವಗಳಿಗೆ ಶ್ರದ್ಧೆ, ಭಕ್ತಿ, ಆಚರಣೆ ಸಂಪ್ರದಾಯಗಳಲ್ಲಿ ಭಂಡಾರ ಸಂಸ್ಕೃತಿಯು ಮುಖ್ಯ ಪಾತ್ರವಹಿಸುತ್ತದೆ.

ಭಂಡಾರ ಉಪಯೋಗ, ಭಂಡಾರ ಸಿದ್ಧತೆಯನ್ನು ವಿವಿಧ ರೀತಿಯ ಸಂಪ್ರದಾಯಬದ್ಧವಾಗಿ ತಯಾರಿಸುವ ಅವರ ಆಚರಣೆಯು ವಿಶಿಷ್ಟವೆನಿಸಿದೆ. ಭಂಡಾರದ ಬಗ್ಗೆ ಜನಪದರ ಶ್ರದ್ಧಾಭಕ್ತಿಯು ಇಟ್ಟಿರುವುದು ಒಂದು ಸೋಜಿಗದ ವಿಷಯವಾಗಿದೆ.

ಭಂಡಾರ ಜನಪದರ ದೃಷ್ಟಿಯಲ್ಲಿ ಜಡವಾಗಿರದೇ ಅನೇಕ ಸಂದರ್ಭದಲ್ಲಿ ಒಂದು ಚೇತನ ಶಕ್ತಿಯಾಗಿ ದೇವರನ್ನು ಪ್ರತಿನಿಧಿಸುತ್ತದೆ. ಆಧುನಿಕ ಪ್ರಪಂಚದಲ್ಲಿ ಕೂಡ ಭಂಡಾರವನ್ನು ಹಾಲುಮತ ಸಮುದಾಯದವರು ಅನೇಕ ಸಂಪ್ರದಾಯ, ಆಚರಣೆಗಳಲ್ಲಿ ಮುಂದುವರೆಸಿಕೊಂಡು ಬಂದಿರುವುದು ಒಂದು ವಿಶಿಷ್ಟವಾದ ಪರಿಕಲ್ಪನೆಯಾಗಿದೆ. ಹಾಲುಮತ ದೈವಗಳಾದ ಬೀರಪ್ಪ, ಮೈಲಾರಲಿಂಗ, ಅಮೋಘಸಿದ್ಧ ಮುಂತಾದ ದೈವಗಳ ಜಾತ್ರೆ–ಉತ್ಸವದ ಸಂದರ್ಭದಲ್ಲಿ ಭಂಡಾರದ ಬಳಕೆ ಭಾವನಾತ್ಮಕವಾದ ನಂಬಿಕೆಗಳು ಕಾಣಬಹುದಾಗಿದೆ. ಅಲ್ಲದೇ ಪವಾಡ ಸಂದರ್ಭದಲ್ಲಿ ಭಂಡಾರದ ಕುರುಹು ಅಂದರೆ ಮಳೆ–ಬೆಳೆ ಸಂಬಂಧಿ ಭವಿಷ್ಯಗಳ ವಾಣಿಯನ್ನು ಕುರುಬ ಜನಾಂಗದ ನಂಬಿಕೆಯು ಒಂದು ಮುಗ್ಧತೆಯ ವಾತಾವರಣವನ್ನು ಸೃಷ್ಟಿಸುವಲ್ಲಿ ಭಂಡಾರ ಪ್ರಮುಖ ಪಾತ್ರವಹಿಸುತ್ತದೆ. ಹಾಲುಮತ ಸಮುದಾಯದ ಭಂಡಾರ ಸಂಸ್ಕೃತಿಯು ವಿಭೂತಿಯತ್ತ ಪರಿವರ್ತನೆಯನ್ನು ಕೂಡ ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

'ಭಂಡಾರ' ಸಂಸ್ಕೃತಿಯಲ್ಲಿ ಜಾತಿಬೇಧವಿಲ್ಲದೇ ಸರ್ವ ಸಮನ್ವಯ ಧಾರ್ಮಿಕ ಆಚರಣೆಯಾಗಿದೆ. ಭಂಡಾರ ಸಿದ್ಧತೆಯಲ್ಲಿ ಕುರುಬರು, ಒಡೆಯರು ಸೇರಿರುತ್ತಾರೆ. ಅಲ್ಲದೇ ಮುಕ್ತವಾದ ಮನೋಭಾವನೆಯನ್ನು ಕಾಣಬಹುದಾಗಿದೆ. ಭಂಡಾರ ಕೇವಲ ಅರಿಶಿಣ ಪುಡಿಯಾಗಿರದೇ ಜನರ ಬದುಕಿನಲ್ಲಿ ಸಾಂಸ್ಕೃತಿಕ ನೆಲೆಯನ್ನು ಹೊಂದಿದೆ. ಇದನ್ನು ನಾಲ್ಕನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಭಂಡಾರ ಸಾಂಸ್ಕೃತಿಕ ಮಹತ್ವದಲ್ಲಿ ಕುರುಬರ ಜೀವನ ಕ್ರಮದಲ್ಲಿ ಮತ್ತು ಆಚರಣೆ–ಸಂಪ್ರದಾಯ–ನಂಬಿಕೆಯಲ್ಲಿ ಭಂಡಾರ ಒಂದು ಬೃಹತ್ ಸಾಂಸ್ಕೃತಿಕ ಮಹತ್ವವನ್ನು ಒಳಗೊಂಡಿದೆ. ಪ್ರಸ್ತುತ ಈ ಅಧ್ಯಾಯವು ಭಂಡಾರ ಔಷಧ ರೂಪದಲ್ಲಿ ಉಪಯೋಗವಾಗುವುದನ್ನು ಮತ್ತು ಶುಭಕಾರ್ಯದಲ್ಲಿ ಬಳಕೆ ಹಾಗೂ ಗೋರವಯ್ಯರ ವೇಷಭೂಷಣದಲ್ಲಿ ಅಲ್ಲದೇ ಕೆಲವು ವಿಧಿನಿಷೇಧಗಳನ್ನು ಒಳಗೊಂಡಿರುವುದನ್ನು ಸಾಂಸ್ಕೃತಿಕ ಚೌಕಟ್ಟಿನಲ್ಲಿ ಭಂಡಾರವನ್ನು ಚರ್ಚಿಸಲಾಗಿದೆ.

ಅಧ್ಯಯನದ ಒಟ್ಟು ಫಲಿತಗಳನ್ನು ಸಮಾರೋಪದಲ್ಲಿ ಸಮೀಕ್ಷಿಸಲಾಗಿದೆ. ಈ ಅಧ್ಯಯನಕ್ಕಾಗಿ ಪ್ರಮುಖವಾಗಿ ಕ್ಷೇತ್ರಕಾರ್ಯವನ್ನು ಅಳವಡಿಸಿಕೊಂಡಿದೆ.

ಗ್ರಂಥದ ಕೊನೆಯಲ್ಲಿ ಮುಖ್ಯವಾಗಿ ಐದು ಅನುಬಂಧಗಳು ಸೇರಿಕೊಳ್ಳುತ್ತವೆ. ಭಂಡಾರದ ಕುರಿತಾದ ಹಾಡುಗಳ ಸಂಗ್ರಹ, ಛಾಯಾಚಿತ್ರಗಳು, ವಕ್ತೃಗಳ ವಿವರ, ಪರಾಮರ್ಶನ ಗ್ರಂಥಗಳ ವಿವರಗಳನ್ನು ನೀಡಲಾಗುವುದು.

## ಅಧ್ಯಾಯ – ಎರಡು

# ಭಂಡಾರ: ಅರ್ಥ, ವ್ಯಾಖ್ಯೆ ಮತ್ತು ಉಲ್ಲೇಖಗಳು

ಭಂಡಾರದೊಡೆಯನಾದ ಮೈಲಾರಲಿಂಗನು ಕುರುಬರ ಆರಾಧ್ಯ ದೈವವಾಗಿದ್ದು, ಅವನು ಗುಡ್ಡ ಬೆಟ್ಟಗಳಲ್ಲಿ ಮತ್ತು ಕಾಡಿನೊಳಗಿರುವ ಗಿರಿಪರ್ವತ ಪ್ರದೇಶಗಳಲ್ಲಿದ್ದಾನೆ. ಇವನು ಬೇಟೆಗೆ ಹೋಗುವನು ಆತನೊಂದಿಗೆ ಜನರನ್ನು ಪ್ರಾಣಿಗಳನ್ನು ಸೀಳುವಂಥ ಉಗ್ರರೂಪದ ನಾಯಿಗಳಿವೆ. ಈ ಮೈಲಾರಲಿಂಗಯ್ಯನು ಧೂಪ, ಭಂಡಾರ ಎರಚಿ ಯಾರನ್ನಾದರೂ ವಶೀಕರಣ ಮಾಡುವನು ಮನುಷ್ಯನಿಗೆ ಅಸಾಧ್ಯವೆನಿಸುವಷ್ಟು ದೈಹಿಕ ಕೆಲಸಗಳನ್ನು ಒಂದೇ ದಿನದಲ್ಲಿ ಏಕಾಂಗಿಯಾಗಿ ಮಾಡಿ ಮುಗಿಸುವನು ಹೀಗೆ ನಿಸರ್ಗ ಸಂಸ್ಕೃತಿಯೊಂದಿಗೆ ಅವಿನಾಭಾವದಿಂದ ಬೆರೆತುಕೊಂಡಿದ್ದ ಶ್ರಮ ಸಂಸ್ಕೃತಿಯನ್ನು ದೇವರು ಮತ್ತು ಜೀವನ ವಿಧಾನವನ್ನು ಕಾಣಬಹುದಾಗಿದೆ.

ಭಂಡಾರ ಶಬ್ದವು ಹಾಲುಮತಸ್ಥರ ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಬಹುದೊಡ್ಡ ಗೌರವಕ್ಕೆ ಪಾತ್ರವಾಗಿದೆ.

ಭಂಡಾರ ಸರ್ವರೋಗಕ್ಕೂ ಔಷಧ ರೂಪದಲ್ಲಿ ಬಳಸಲಾಗುತ್ತದೆ. ಭಂಡಾರ ಎನ್ನುವ ಪದ ಮೂಲತಃ ಸಂಸ್ಕೃತದ "ನೈಶಚೂರ್ಣ" ರೂಪದಿಂದ ಬಂದಿದ್ದಾಗಿದೆ. ಭಂಡಾರ ಎನ್ನುವುದು ಅರಿಶಿನದ ಪುಡಿ ಆಗಿದೆ. ಆದರೆ ಆ ಶಬ್ದಕ್ಕೆ ಬಹುದೊಡ್ಡ ಸಾಂಸ್ಕೃತಿಕ ಆಯಾಮವಿದೆ.

ಭಂಡಾರ, ಬಂಡಾರ, ಬಂಡಾಜಿ ಎಂಬರ್ಥವನ್ನು ಸೂಚಿಸುತ್ತದೆ. ಇದನ್ನು ಎರಡು ರೀತಿಯಲ್ಲಿ ಕಾಣಬಹುದಾಗಿದೆ.

೧. ಖಂಡೋಬಾ ಮೈಲಾರ, ಬೀರಪ್ಪ, ಅಮೋಘಸಿದ್ಧ, ಮಾಳಿಂಗರಾಯ ಮುಂತಾದ ಪುರುಷ ದೇವರುಗಳಲ್ಲದೇ ಸ್ತ್ರೀ ದೇವತೆಗಳಾದ ಹುಲಿಗೆಮ್ಮ, ಎಲ್ಲಮ್ಮ, ಮಾಯಮ್ಮ, ಗುತ್ತೆಮ್ಮ, ದುರ್ಗಮ್ಮ

ಮುಂತಾದ ದೈವಗಳಾದ ಪೂಜೆಯ ನಂತರ ಪ್ರಸಾದ ರೂಪವಾಗಿ ಅರಿಶಿಣ–ಕುಂಕುಮ ಮುಂತಾದವುಗಳಾಗಿವೆ.

"ಭಂಡಾರ, ಹೊನ್ನ ಸಂಚವುಂ ಅರಿಶಿನದ ಪುಡಿಯಂ (ಕಾಶಕ್ಯ–೨೭೦)

೨. "ಬೆಲೆ ಬಾಳುವ ವಸ್ತುಗಳನ್ನು ಸಂಗ್ರಹಿಸಿಡುವ ಸ್ಥಳ ಬೊಕ್ಕಸ ಖಜಾನೆ ಎಂದರ್ಥವಿದೆ.

ಉದಾ: "ಭಂಡಾರವೆಂದುಕೋಶಗೃಹಂ"[7] (ಪಂಪಭಾರತ) ಈ ರೀತಿಯಾಗಿ ಹಲವು ಅರ್ಥಗಳನ್ನು ಭಂಡಾರದಲ್ಲಿ ಕಾಣಬಹುದಾಗಿದೆ. ಹಾಲುಮತ ದೈವವಾದ ಮೈಲಾರಲಿಂಗನ ಸಂಪ್ರದಾಯದ ಭಂಡಾರವೆಂದರೆ ಅರಿಶಿಣಪುಡಿ, ಈ ಸಂಪ್ರದಾಯದ ಪ್ರಮುಖ ವೈಶಿಷ್ಟ್ಯಗಳಲ್ಲಿ ಒಂದಾಗಿದೆ. ಇದು ತುಂಬ ವ್ಯಾಪಕವಾಗಿ ನಡೆಯುವುದು ಕಂಡುಬರುತ್ತದೆ. ಈ ದೇವರನ್ನು ಭಕ್ತರಾದ ಕುರುಬರು "ಖಂಡುಗ ಭಂಡಾರದೊಡೆಯ" ಎಂದೂ ಭಂಡಾರಕ್ಕೆ ಇವನೆ "ಆದಿಕರ್ತ" ಎಂದು ಜನಪದ ಹಾಡುಗಳಲ್ಲಿ ವರ್ಣಿಸಿದ್ದಾರೆ. ಶಿವನು ಲಿಂಗರೂಪದಲ್ಲಿ ಭೂಲೋಕದಲ್ಲಿ ಆವರಿಸಿದಾಗ ಅವನ ಜೊತೆಗೆ ಭಂಡಾರವು ಹುಟ್ಟಿತೆಂದು ಆದುದರಿಂದಲೇ ದೇವತೆಗಳು ಋಷಿಗಳು ಸೇರಿ ಅವನನ್ನು ಪೂಜಿಸಿದರೆಂದು ಕತೆಗಳು ಪ್ರಚಲಿತವಾಗಿದೆ. ಒಟ್ಟಾರೆ ಮೈಲಾರಲಿಂಗನ ಭಕ್ತರ ನಂಬಿಕೆಯಲ್ಲಿ ಭೂಲೋಕದಲ್ಲಿ ಮೊದಲು ಹುಟ್ಟಿದ್ದೇ ಭಂಡಾರ. ಆದ್ದರಿಂದ ದೇವರ ಪೂಜೆಗೂ ತಮ್ಮ ನಿತ್ಯನೈಮಿತ್ತಿಕ ಕಾರ್ಯಗಳಿಗೂ ಭಂಡಾರ ಉಪಯೋಗಿಸುತ್ತಾರೆ. ಷಷ್ಠಿ ಭಂಡಾರ ತಯಾರಿಕೆಯಲ್ಲಿ ಕುರಿ ಉಣ್ಣೆಯನ್ನು ಹಾಕುವುದರಿಂದ ಇದಕ್ಕೆ "ಕರಿಯೆಳೆ ಭಂಡಾರ" ಎಂದೂ ಸಹ ಕರೆಯುತ್ತಾರೆ. ಈ ಭಂಡಾರಕ್ಕೆ ಹಾಲುಮತಸ್ಥರು ಹಲವು ರೀತಿಯ ಸ್ಥಾನವನ್ನು ಕೊಟ್ಟಿದ್ದಾರೆ. ಭಂಡಾರದ ಒಡೆಯರು, ಪ್ರಾಚೀನ ಕಾಲದ ಭಂಡಾರ ಬಟ್ಟಲು ಪರಂಪರೆ ಭಂಡಾರದ ಗೋರವಯ್ಯರು ಭಂಡಾರ ಮನೆತನದವರು ಹಾಗೂ ಭಂಡಾರಿಗಳು ಎಂದು ಭಂಡಾರಕ್ಕೆ ಪ್ರಾಮುಖ್ಯತೆಯ ಸ್ಥಾನ ನೀಡಿದ್ದಾರೆ. ಇನ್ನೂ ಮಹಾರಾಷ್ಟ್ರದ ಖಂಡೋಬನ ಸಂಪ್ರದಾಯದಲ್ಲಿ ಭಂಡಾರದ ಬಗ್ಗೆ ತಿಳಿಯಬಹುದಾಗಿದೆ. ಭಂಡಾರದಲ್ಲಿ ರೋಗ ನಿರೋಧಕ ಔಷಧಿಯ ಗುಣವಿರುತ್ತದೆ. ಇದು ಹಸಿರು ಸಸ್ಯವಾಗಿದ್ದು ಮೈತುಂಬಿಕೊಂಡ ನಂತರ ಹಳದಿಗೆ ತಿರುಗುತ್ತದೆ. ಅರಿಶಿಣದ ಪುಡಿಯನ್ನು ಜನಪದರ ದೃಷ್ಟಿಯಲ್ಲಿ ಭಂಡಾರ ಎಂದು ಹೇಳುವುದು ಗ್ರಾಮೀಣ ಭಾಷೆಯಾಗಿದೆ. ಭಂಡಾರವನ್ನು ಅನೇಕ ಜನರು ಮತ್ತು ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ. ಮೈಲಾರಲಿಂಗನ ಮತ್ತು ಹುಲಿಗೆಮ್ಮನ ಭಕ್ತರ ದೃಷ್ಟಿಯಲ್ಲಿ ಭಂಡಾರ ಬಂಗಾರಕ್ಕೆ ಸಮ ಎನ್ನುವ ಭಾವನೆಯನ್ನು ವ್ಯಕ್ತಪಡಿಸುತ್ತಾರೆ.

ಭಂಡಾರವು ರೋಗನಿರೋಧಕವಾದುದೆಂದು ಮತ್ತು ಮೈಲಾರನು ರಾಕ್ಷಸಸಂಹಾರ ಮಾಡಿದಾಗ ಸಣ್ಣಗಾಯ ಆದಾಗ ಅರಿಶಿಣದ ಪುಡಿಯನ್ನು ಹಚ್ಚುತ್ತಾನೆ. ಅದೇ ಭಂಡಾರವೆಂದು ಕರೆಯುತ್ತಾರೆಂದು,

ಭಂಡಾರವೆಂದರೆ ಮೈಲಾರ ಎಂಬ ಅಭಿಪ್ರಾಯವನ್ನು ಮೈಲಾರನ ಭಕ್ತರು ವ್ಯಾಖ್ಯಾನವಾಗಿದೆ. ಇದು ಕ್ಯಾನ್ಸರ್ ಕಾಯಿಲೆಯನ್ನು ಗುಣಪಡಿಸುತ್ತದೆ ಎಂಬ ಹೇಳಿಕೆಯನ್ನು ನೀಡಿದ್ದಾರೆ. ಅಲ್ಲದೇ ಭಕ್ತರಿಗೆ ಮತ್ತು ಗೋರವಯ್ಯರಿಗೆ ಭಂಡಾರವನ್ನು ಹಣೆಗೆ ಹಚ್ಚುವುದರಿಂದ ಭಕ್ತನ ಮತ್ತು ಗೋರವ-ಗೋರವಿಯರ ಪಾಪ ಪರಿಹಾರವಾಗಳೆಂಬ ಭಾವನೆಯಿಂದ ಭಂಡಾರವನ್ನು ಪರಸ್ಪರ ಹಣೆಗೆ ಹಚ್ಚಿಕೊಳ್ಳುತ್ತೇವೆಂದು ಗೋರವಿಯು ತನ್ನ ಅಭಿಪ್ರಾಯ ವ್ಯಕ್ತಪಡಿಸಿದ್ದಾಳೆ. ಈ ರೀತಿಯಾಗಿ ಭಂಡಾರ ಎಂಬರ್ಥ ಹಲವು ರೀತಿಯ ನೆಲೆಯಲ್ಲಿ ಭಂಡಾರದ ಮಹತ್ವವನ್ನು ಗುರುತಿಸಿಕೊಳ್ಳುತ್ತ ಸಾಗಿದೆ. ಮತ್ತು ಇಂದಿಗೂ ಹರಿಯುವ ನೀರಿನಂತೆ ಮುನ್ನಡೆಯುತ್ತದೆ.

"ಇಂಥರ್ಟ್ಸನ್ ಕುರ್ನಿ(ಕುರುಹಿನಶೆಟ್ಟಿ) ಒಡ್ಡೆ ಅಗಸ ಮತ್ತು ಕುರುಬ ಜಾತಿಯ ಗೋತ್ರ ಸಂಕೇತಗಳಲ್ಲಿ ಅರಿಶಿಣವು ಒಂದು ಎಂದು ನಮೂದಿಸಿದ್ದಾರೆ. ಭಂಡಾರದ ಬಳಕೆಯ ವ್ಯಾಪಕತೆಯನ್ನು ಗಮನಿಸಿದಾಗ ಗೋತ್ರ ಅಥವಾ ಬೆಡಗಿನ ಸಂಕೇತವಾಗಿ ಅದು ರೂಢವಾಗಿರುವುದು ಸಹಜವಾದ ಸಂಗತಿ ಎಂದೆನಿಸುತ್ತದೆ"[೨] ಎಂದು ಎಂ.ಬಿ. ನೇಗಿನಹಾಳ ಅವರು ಹೇಳಿದ್ದಾರೆ.

ಹಾಲುಮತಸ್ಥ ಸಮುದಾಯದ ಭಂಡಾರ ಸಂಸ್ಕೃತಿಯ ಪ್ರಾಚೀನತೆಯನ್ನು ೧೨ನೇ ಶತಮಾನಕ್ಕೂ ಮೊದಲೇ ಈ ಸಂಪ್ರದಾಯವೂ ರೂಢಿಯಲ್ಲಿತ್ತು ಎಂಬುದಕ್ಕೆ ಬಹಳಷ್ಟು ಪುರಾವೆಗಳು ದೊರಕುತ್ತವೆ. ಈ ಸಂಪ್ರದಾಯವು ೧೦ನೇ ಶತಮಾನದವರೆಗೆ ಮಾತ್ರ ಗುರುತಿಸಲು ಸಾಧ್ಯವಾಗಿದೆ. ಪ್ರಾಚೀನತೆಯನ್ನು ಮತ್ತು ಇತಿಹಾಸ ತಿಳಿಯಲು ಪೌರಾಣಿಕ, ಐತಿಹಾಸಿಕ, ಜನಪದ ಸಾಹಿತ್ಯ ಆಕರಗಳು ಬಹುಮುಖ್ಯವಾಗಿದೆ. ಈ ದೃಷ್ಟಿಯಿಂದ ಈ ಸಂಪ್ರದಾಯದ ಕೋಲು, ಬಿಲ್ಲು, ಬಾಣ, ಶೂಲ ಭಂಡಾರ ಬಟ್ಟಲು ಮುಂತಾದವುಗಳ ಹಿನ್ನಲೆಯಲ್ಲಿ ಪ್ರಾಚೀನತೆ ತಿಳಿಯಬೇಕಾಗಿದೆ. ಭಂಡಾರ ಸಂಸ್ಕೃತಿಯು ಕುರುಬರ ಜನಸಮುದಾಯದಲ್ಲಿ ಪೂರ್ವದಿಂದಲೂ ಮಹತ್ವ ಸ್ಥಾನ ಪಡೆದಿದೆ. ಈ ಭಂಡಾರ ಸಂಸ್ಕೃತಿಯು ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರ ರಾಜ್ಯಗಳ ಬೇರೆ ಬೇರೆ ಭಾಷೆ ಮತ್ತು ಕೃತಿಗಳಲ್ಲಿ ಉಲ್ಲೇಖಗೊಂಡಿರುವುದನ್ನು ಸಾಕ್ಷಿಭೂತವಾಗಿ ತಿಳಿಸುತ್ತದೆ.

ಈ ಉಲ್ಲೇಖಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಪ್ರಧಾನವಾಗಿ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಅವು ಈ ಕೆಳಗಿನಂತೆ ಮಾಡಲಾಗಿದೆ.

**ಉಲ್ಲೇಖಗಳು**



ಈ ಮೂರು ವಿಭಾಗಗಳಲ್ಲಿ ಭಂಡಾರ ಸಂಸ್ಕೃತಿಯೂ ಕುರಿತಾದ ಸಂಪ್ರದಾಯ ಜನಪದರಲ್ಲಿ ಹಾಸುಹೊಕ್ಕಾದ ಬಗೆಯನ್ನು ಅರ್ಥೈಸಿಕೊಳ್ಳುವಲ್ಲಿ ಈ ಉಲ್ಲೇಖಗಳು ಸಹಕಾರಿಯಾಗುತ್ತದೆ.

**I. ಪೌರಾಣಿಕ :**

ಭಾರತೀಯರಿಗೆ ವೇದಗಳು ಪುರಾಣಗಳು ಮಹಾಕಾವ್ಯಗಳು ಅತ್ಯಂತ ಗೌರವಕ್ಕೆ ಪಾತ್ರವಾದ ಪೂಜನೀಯಗ್ರಂಥಗಳಾಗಿವೆ. ಸಾಮಾನ್ಯವಾಗಿ ಪುರಾಣಗಳಿಗೂ ಮತ್ತು ಧಾರ್ಮಿಕ ಕ್ಷೇತ್ರಗಳಿಗೂ ಅವಿನಾಭಾವ ಸಂಬಂಧ ಅನಾದಿಕಾಲದಿಂದಲೂ ಅನೂಚಾನವಾಗಿ ನಡೆದುಕೊಂಡು ಬಂದಿದೆ.

ಪುರಾಣಗಳು ದೇವರಿಗೆ ಸಂಬಂಧಿಸಿದ್ದು ದೇವತೆಗಳನ್ನು ಅಲೌಕಿಕವಾಗಿ ವೈಭವೀಕರಿಸುವುದೇ ಇವುಗಳ ಉದ್ದೇಶವಾಗಿದೆ. ಪುರಾಣಗಳಲ್ಲಿ ದೇವರ ಅವತಾರಗಳನ್ನು ಕಾಣಬಹುದಾಗಿದೆ. ಪುರಾಣಗಳಲ್ಲಿ ಸಾಮಾನ್ಯ ವಿಷಯಗಳು ಮತ್ತು ವಸ್ತುಗಳ ಸುತ್ತ ಇರುವ ಒಂದು ಧರ್ಮದ ಮನೋಭಾವದ ಜೊತೆಗೆ ಅಲ್ಲಿನ ದೈವಕ್ಕೂ ಆ ವಸ್ತುವಿಗೂ ಇರುವ ಸಂಬಂಧವನ್ನು ಪ್ರಕಟಗೊಳಿಸುವುದು ಹೀಗಾಗಿಯೇ ಪೌರಾಣಿಕ ಉಲ್ಲೇಖಗಳೂ ಕೂಡ ಅಧ್ಯಯನದಲ್ಲಿ ಮಹತ್ವ ಸ್ಥಾನ ಪಡೆಯುತ್ತಿವೆ. ಅಂಥ ಪೌರಾಣಿಕವಾದ ಕೆಲವೊಂದು ಮಹತ್ವದ ಅಂಶಗಳನ್ನು ಈ ಮುಂದೆ ಗಮನಿಸಬಹುದಾಗಿದೆ.

ಸಂಸ್ಕೃತ ಮತ್ತು ಮರಾಠಿ ಭಾಷೆಯ ಪುರಾಣಗಳಲ್ಲಿ ಭಂಡಾರದ ಪ್ರಸ್ತಾಪವನ್ನು ಈ ಪುರಾಣಗಳ ಮೂಲಕ ವಿವೇಚಿಸಬಹುದಾಗಿದೆ.

**ಬ್ರಹ್ಮಾಂಡ ಪುರಾಣ :**

"ಪರಮಶಿವನು ಮಾರ್ತಾಂಡ ಭೈರವನ ಅವತಾರತಾಳಿ ಅಸುರ ಮರ್ದನಕ್ಕಾಗಿ ಸಿದ್ಧನಾದಾಗ ಶಿವನಿಗೆ ರೌದ್ರ ಶಕ್ತಿಯ ಅಗತ್ಯವಿದ್ದಾಗ ನಂದಿಯ ಕೊಂಬನ್ನು ಮುರಿದು ಭಂಡಾರವನ್ನಾಗಿ ತೇದು ಶಿವನಿಗೆ ಲೇಪಿಸಿದಾಗ ಶಿವನಿಗೆ ಕೋಟಿ ಮಾರ್ತಾಂಡನ ಶಕ್ತಿ ಪ್ರಜ್ವಲಿಸುತ್ತದೆ. ಹೀಗೆ ಪರಶಿವನು ಮಾರ್ತಂಡ ಭೈರವನಾಗಿ ಅವತರಿಸಿ ಲೋಕೋದ್ಧಾರಕ್ಕಾಗಿ ಅಸುರಮರ್ದನಗೈದು ಶ್ರೀಮೈಲಾರದಲ್ಲಿ ಸ್ವಯಂಭೂಲಿಂಗವಾಗಿ ನೆಲೆಸಿದ"[೩] ಕಥೆ ಬ್ರಹ್ಮಾಂಡ ಪುರಾಣದಲ್ಲಿ ಬಂದಿವೆ. ಕ್ಷೇತ್ರ ಖಂಡದ ಮೊದಲ ಹದಿನೆಂಟು ಅಧ್ಯಾಯಗಳು ಹಾಗೂ ನಾಲ್ಕೂ ಅಧ್ಯಾಯಗಳು ಒಟ್ಟು ಇಪ್ಪತ್ತೆರಡು ಅಧ್ಯಾಯಗಳಲ್ಲಿ ಮಹಾಮಹಿಮ ಮೈಲಾರಲಿಂಗೇಶ್ವರನ ಅವತಾರ ಜೊತೆಗೆ ಭಂಡಾರ ಸೃಷ್ಟಿಯ ಬಗ್ಗೆ ವರ್ಣಿಸಲ್ಪಟ್ಟಿದೆ.

**ಮಲ್ಲಾರಿ ಮಹಾತ್ಮೆ :**

ಸಂಸ್ಕೃತದಲ್ಲಿ ಪುರಾಣದಲ್ಲಿ ರಚಿತವಾದದ್ದು ಕ್ರಿ.ಶ.೧೪ನೇ ಶತಮಾನದ ಖಂಡೋಬಾ ಅಥವಾ ಮೈಲಾರಲಿಂಗನ ಅವತಾರ ಮತ್ತು ಭಂಡಾರದ ಉಲ್ಲೇಖಗಳನ್ನು ಕಾಣಬಹುದಾಗಿದೆ. "ಮಲ್ಲಾರಿ

ಮಹಾತ್ಮೆಯನ್ನು ಮಣಿಮುಲ್ಲಾಸುರನ ವಧೆ ಅದಕ್ಕಾಗಿ ದೇವರ ಅವತಾರ ಮತ್ತು ಘೃತಮಾರಿಯರ ಉತ್ಪತ್ತಿಗಳು ಮಾತ್ರ ಎಡೆ ಪಡೆದಿವೆ. ಕುರುಬರ ಮಾಳವ್ವನ ಪ್ರೇಮ ಪ್ರಸಂಗವೂ ಇತ್ತೀಚಿನ ಮರಾಠಿ ಪುರಾಣಗಳಲ್ಲಿ ಎಡೆಪಡೆದಿವೆ. ಇದರ ಜೊತೆಗೆ ಕುದುರೆ ನಾಯಿ ಲಿಂಗ ಭಂಡಾರ ಮುಂತಾದ ವಸ್ತುಗಳ ಬಗ್ಗೆ ಕೂಡ ಉಜ್ವಲೀಕೃತ ಅಖ್ಯಾಯಿಕೆಗಳು ಮಹಾರಾಷ್ಟ್ರದಲ್ಲಿ ಹುಟ್ಟಿಕೊಂಡಿದೆ"[೪] ಮಾರ್ಗಶೀರ್ಷ ಮಾಸದ ಶುದ್ಧ "ಛಟ್ಟಿಯಂದು ಚಂದನು ಶತತಾರಾ ನಕ್ಷತ್ರದಲ್ಲಿ ಕಲಿಯುಗದ ಮಣಿಚೂಲ ಪರ್ವತದಲ್ಲಿ ವಟವೃಕ್ಷದ ಕೆಳಗೆ ಸ್ವಯಂಭೂಲಿಂಗ ರೂಪದಲ್ಲಿ ಪ್ರಕಟವಾದನು. ಲಿಂಗದ ಹಿಂದೆ ಮುನಿಗಳು ಶಿವನ ಬೋಗಮೂರ್ತಿಯನ್ನು ಮಣ್ಣಿನಿಂದ ರಚಿಸಿ ಪೂಜಿಸಿದರು ಪೂಜೆಯ ಕಾಲದಲ್ಲಿ ಭಂಡಾರ ಮುಂತಾದ ಪವಿತ್ರ ವಸ್ತುಗಳನ್ನು ಉಪಯೋಗಿಸಿದರು"[೫] ಅಂದಿನಿಂದ ಛಟ್ಟಿ ಅಮವಾಸ್ಯೆಯಂದು ಭೂಲೋಕದ ಜನರು ಸ್ವಯಂಭೂಲಿಂಗಕ್ಕೆ ಭಂಡಾರ ಪೂಜೆಸಲ್ಲಿಸುತ್ತಾರೆ ಎಂದು ಮೈಲಾರ ಮತ್ತು ಖಂಡೋಬ ಎಂಬ ಕೃತಿಯಲ್ಲಿ ಎಂ.ಬಿ. ನೇಗಿನಹಾಳ ಅವರು ತಿಳಿಸಿದ್ದಾರೆ.

**ಮಾತಾರ್ಂಡ ವಿಜಯ :**

ಮರಾಠಿ ಕಾವ್ಯ ಕ್ರಿ.ಶ.೧೮೨೪ರಲ್ಲಿ ಗಂಗಾಧರ ಎಂಬ ಕವಿಯಿಂದ ರಚಿತವಾಗಿದೆ. ಇದರಲ್ಲಿ ಬಾಣಯಿ ಹೆಗ್ಗಡೆ-ಪ್ರಧಾನಿ, ಘೃತಮಾರಿ, ಪಂಚಲಿಂಗಗಳು ಜಾನಾಯಿ ಮುಂತಾದವರ ಮಹಿಮೆಗಳು ಸೇರಿಸಲ್ಪಟ್ಟಿವೆ. ಅಲ್ಲದೆ ಖಂಡೋಬಾ ಸಂಬಂಧಿಯಾದ 'ತಳಿ' ಕಾಯ್-ಕೋಲು ದೀವಟಿಗೆ ಜಾಗರಣ, ಭಂಡಾರ ಶ್ವಾನ ಮುಂತಾದವುಗಳ ಆಚರಣೆ ಮತ್ತು ಮಹತ್ವಗಳು ಸೇರಿಸಲ್ಪಟ್ಟಿವೆ. ಇದು ವಿಸ್ತಾರದಲ್ಲಿ ಇತರ ಎಲ್ಲ ಗ್ರಂಥಗಳಿಗಿಂತ ದೊಡ್ಡದಾಗಿದೆಯೆಂದು ಹೇಳಲಾಗಿದೆ. "ಮಾತಾರ್ಂಡ ವಿಜಯದ ಪ್ರಕಾರ 'ಭಂಡಾರ ರಜನಿ' ಎಂಬ ಹೆಸರಿನ ದಾಸಿ ಕೈಲಾಸದಲ್ಲಿ ಶಿವನ ಪರಿಚಾರಿಕೆಯಾಗಿದ್ದ ಅವಳ ಅಪೇಕ್ಷೆಯಂತೆ ವರವಿತ್ತುದರಿಂದ ಭೂಲೋಕಕ್ಕೆ ಬಂದು ಅವಳು ಹಳದೀ ಸಸ್ಯವಾದಳು. ಆ ಸಸ್ಯ ಉದಯಿಸಿದ್ದು ಕುಮಾರ ಪರ್ವತದಲ್ಲಿ ಆದ್ದರಿಂದ ಅದಕ್ಕೆ 'ಕುಮಾರ ನಾಬಿಜೆ' ಎಂಬ ನಾಮ ಲಭ್ಯವಾಯಿತು. ಭಕ್ತರು ಅದನ್ನು ಹುಡುಕಿ ತಂದು ಸಂಸ್ಕರಿಸಿ ಶಿವನಿಗೆ ಅರ್ಪಿಸಿದರು. ಅಂದಿನಿಂದ ಭಂಡಾರ ಲೋಕಪಾವನವಾಯಿತು 'ಮಾರ್ತಂಡ ವಿಜಯ'ದಲ್ಲಿ ಮುಂದಿನ ಮಂತ್ರ ಹೇಳಲಾಗಿದೆ. "ಸ್ಕಂದನಾಬಿ, ಸಮುದ್ಭೋತೇ ಶ್ರೀ ಮೈರಾಲ ಪ್ರಿಯಂಕರೀ ಗೌರಿಪ್ರಿಯೆ ಕತಡಿದ್ ಗೌರಿ ಲಕ್ಷ್ಮೀಸುತೇ ನಮಸ್ತುತೇ"

"ಹರಿಗದ್ರಾ ಸುವರ್ಣಾಭಾ ಸರ್ವ ಸೌಭಾಗ್ಯದಾಯಿನೀ
ಸರ್ವಾಲಂಕಾರ ಮುಖ್ಯಹಿ ದೇವಿತ್ವಂ ಪ್ರತಿಗೃಹ್ಯತಾಮ್"[೬]

ಹೀಗೆ, ಮಾರ್ತಾಂಡ ವಿಜಯ ಮರಾಠಿ ಕಾವ್ಯದಲ್ಲಿ ಭಂಡಾರದ ಉಲ್ಲೇಖವಿದೆ. "ಪೇಶ್ವೆಯ ಉತ್ತರಾಧಿಕಾರಿ ಸವಾಯಿ ಮಾಧವರಾವ ಹುಟ್ಟಿದಾಗ ನಾನಾ ಫಡವೀಸನು ಜೆಜೂರಿಗೆ ಬಂದು ಹರಕೆ ತೀರಿಸಿದನು. ಇವನು ಒಂದು ಸಾವಿರ ರೂ ಬೆಲೆಯ ಒಂದು ಮುತ್ತಿನ ಸರ ಒಂದು ಲಕ್ಷ ರೂಪಾಯಿ ಮತ್ತು ಒಂದು ಮಣ ಭಂಡಾರವನ್ನು ದೇವರಿಗೆ ಅರ್ಪಿಸಿದನು"[೭] ಎಂದು ಎಂ.ಬಿ. ನೇಗಿನಹಾಳ ಅವರು ಹೇಳಿದ್ದಾರೆ. ಹೀಗೆ ಕರ್ನಾಟಕದ ಮೈಲಾರಲಿಂಗ, ಮಹಾರಾಷ್ಟ್ರದ ಖಂಡೋಬ, ಕುರುಬರ ಜನಾಂಗ ರಾಮೋಶಿ (ಬೇಡ) ಕೋಳಿ (ಬೆಸ್ತ) ಮುಂತಾದ ಜನಾಂಗದವರಿಂದ ಮೈಲಾರ ಮತ್ತು ಖಂಡೋಬಾ ಪೌರಾಣಿಕವಾಗಿ ಭಂಡಾರದಿಂದ ಪೂಜಿಸಲಾಗುತ್ತದೆ ಎಂಬ ಉಲ್ಲೇಖಗಳನ್ನು ವ್ಯಕ್ತಪಡಿಸಲಾಗಿದೆ. ಸರ್ವಧರ್ಮ ಸಮನ್ವಯ ಎಂಬ ಭಾವನೆಯಿಂದ ಷಷ್ಠಿ ಭಂಡಾರ ಪೂಜೆಯನ್ನು ಮಾಡುತ್ತಾರೆ.

**II. ಐತಿಹಾಸಿಕ :**

ಒಂದು ಸಮುದಾಯದ ಸಾಂಸ್ಕೃತಿಕ ಕೇಂದ್ರಗಳು ಆಯಾ ಸಮುದಾಯದ ಚರಿತ್ರೆಯನ್ನು ಅರಿಯುವುದಕ್ಕೆ ಬಹುಮುಖ್ಯ ಆಕಾರಗಳಾಗಿವೆ. ಅದಕ್ಕೆ ಹಾಲುಮತ ಸಮುದಾಯವೂ ಹೊರತಲ್ಲ. ಅವುಗಳ ಮೂಲಕ ಹಾಲುಮತ ಸಂಸ್ಕೃತಿಯನ್ನು ಚಾರಿತ್ರಿಕ ಹಿನ್ನೆಲೆಯಲ್ಲಿ ಕಟ್ಟಿಕೊಡಲಾಗಿದೆ. ಶಾಸನ, ಶಿಲ್ಪಕಲೆ, ಮಹಾಕಾವ್ಯ ಮುಂತಾದವು ಭಂಡಾರ ಸಂಸ್ಕೃತಿಯನ್ನು ಅರಿತುಕೊಳ್ಳುವಲ್ಲಿ ಪೂರಕ ಆಕರಗಳಾಗಿ ನಿಲ್ಲುತ್ತವೆ. ಐತಿಹಾಸಿಕವಾಗಿ ಕುರುವು ನೋಡುವುದಾದರೆ ಕೆಲವು ಪ್ರದೇಶಗಳಲ್ಲಿ ಪ್ರಚಲಿತವಿರುವ ಐತಿಹ್ಯ ಇಲ್ಲಿ ಪ್ರಸ್ತಾಪಿಸಬಹುದಾಗಿದೆ. "ಸವದತ್ತಿಯ ಎಲ್ಲಮ್ಮ, ಚಂದ್ರಗುತ್ತಿಯ ಎಲ್ಲಮ್ಮ ಮತ್ತು ಹೊನ್ನತಿಯ ಹೊನ್ನಮ್ಮ ಇವರು ಮೈಲಾರಲಿಂಗನ ತಂಗಿಯರು ಎಂದು ಈ ಮೂವರು ಸಹೋದರಿಯರು ಭಂಡಾರವನ್ನು ತಮ್ಮ ತವರು ಮನೆಯಿಂದಲೇ ಎಂದರೆ ತಮ್ಮ ಅಣ್ಣ ಮೈಲಾರಲಿಂಗಪ್ಪನಿಂದಲೇ ತಂದರೆಂದು ನಂಬಿಕೆಯಿದೆ"[೮] ಎಂಬ ಭಂಡಾರದ ಐತಿಹ್ಯ ಉಲ್ಲೇಖವು ನೇಗಿನಹಾಳರವರ ಪ್ರಬಂಧಗಳಲ್ಲಿ ಕಾಣಬಹುದಾಗಿದೆ.

ಇನ್ನೊಂದು ಐತಿಹ್ಯ ನೋಡುವುದಾದರೆ ಮಹಾರಾಷ್ಟ್ರದ "ಓಡಿಸಾದ ಸವರ ಮತ್ತು ದಿವಯೀ ಜನಾಂಗಗಳಲ್ಲಿ ಪ್ರಚಲಿತವಾಗಿರುವ ಐತಿಹ್ಯಗಳನ್ನು ಕಾಣಬಹುದಾಗಿದೆ. ಅವರ ಪ್ರಕಾರ ಹಳದಿ ಸಸ್ಯವನ್ನು ದೇವರೇ ಸೃಷ್ಟಿಸಿದನು. ಅನ್ನ ಮತ್ತು ಮಾಂಸ ಪದಾರ್ಥಗಳಿಗೆ ರುಚಿ ಬರಲೆಂದು ದೇವರು ಬಲಗೈ ಕಿರುಬೆರಳು ಕತ್ತರಿಸಿ ಅದರಿಂದ ಒಂದು ಹಳದಿ ಸಸ್ಯ ಸೃಷ್ಟಿಸಿದ. ಅದೇ ಅರಿಶಿನ ಎನ್ನಲಾಗಿದೆ. ಅದೇ ರೀತಿ ಇನ್ನೊಂದು ನಂಬಿಕೆಯಂತೆ 'ಕಿತ್ತುಂಗನು' ವಾಂತಿ ಮಾಡಿಕೊಂಡನು ಅದರಿಂದ ಅರಿಶಿನದ ಗಿಡ ಹುಟ್ಟಿತು ಅದೇ ಗಿಡದಿಂದ ಸಿದ್ದವಾದ ಅರಿಶಿನದಿಂದ

ಅವನ ರೋಗ ಗುಣವಾಯಿತು"[೯] ಮೇಲಿನ ಈ ಎರಡು ಐತಿಹ್ಯಗಳಲ್ಲಿ ಅರಿಶಿನದ ಮಹತ್ವಗಳೆಲ್ಲಾ ಬೀಜರೂಪದಿಂದ ಅಡಕವಾಗಿದೆಯೆಂದು ಹೇಳಬಹುದಾಗಿದೆ. ಈ ಹೇಳಿಕೆಯನ್ನು ಎಂ.ಬಿ. ನೇಗಿನಹಾಳರವರು ಮೈಲಾರ ಮತ್ತು ಖಂಡೋಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

**೧. ಶಾಸನ :**

ಹಲವು ಶತಮಾನಗಳಿಂದ ಅನೇಕ ಶಾಸನಗಳಲ್ಲಿ ಕಾವ್ಯಗಳಲ್ಲಿ ಕುರುಬರಿಗೆ ಸಂಬಂಧಿಸಿದಂತೆ ಉಲ್ಲೇಖಗೊಂಡಿದೆ. ಅಲ್ಲದೇ ಅವರ ಆರಾಧ್ಯದೈವ ಭಂಡಾರದ ಒಡೆಯ ಮೈಲಾರಲಿಂಗನ ಭಂಡಾರ ಸಂಪ್ರದಾಯದ ವಿಷಯಗಳು ಶಾಸನಗಳಲ್ಲಿ ದೊರೆಯುತ್ತದೆ.

ಹಿರೇಮೈಲಾರನ ಕಲ್ಮೇಶ್ವರ ಗುಡಿಯ ಶಾಸನ ಈ ದೇವಾಲಯ ಅಥವಾ ಮೈಲಾರಲಿಂಗ ದೇವಾಲಯದ ಅಸ್ತಿತ್ವದಲ್ಲಿದ್ದ ಬಗ್ಗೆ ಸಾಕ್ಷಿ ನುಡಿಯುತ್ತದೆ. "ಮೈಲಾರಲಿಂಗ ದೇವಾಯ ಪೌಳಿಯ ಹೊರಬದಿಯಲ್ಲಿ ಕ್ರಿ.ಶ. ೧೨೮೩ನೆಯ ವರ್ಷದ ಶಾಸನದಲ್ಲಿ ಅಲ್ಲಿನ ದೇವರನ್ನು 'ಗುಂಗು ಜೌಚಂದ ಸ್ವಯಂ ಭೂಕಲಿನಾಥ"[೧೦] ಎಂದು ಕರೆಯುವುದು ಕಂಡುಬರುತ್ತದೆ.

"ಕಲ್ಲೇಶ್ವರ ಅಥವಾ ಕಲ್ಮೇಶ್ವರ ದೇವಾಲಯದಲ್ಲಿರುವ ಶಾಸನದಲ್ಲಿ ಸ್ವಯಂಭೂ ಕಲಿನಾಥನಿಗೆ ನಂದಿಯನ್ನು ಸ್ಥಾಪಿಸಲಾದ ಸಂಗತಿ ಉಕ್ತವಾಗಿದೆ. ತರುವಾಯ ನಮಗೆ ಇಲ್ಲಿನ ಪರಿಸರದಲ್ಲಿ ದೊರೆಯುವ ಮತ್ತು ಸ್ಪಷ್ಟ ಕಾಲ ನಿರ್ದೇಶನವುಳ್ಳ ಶಾಸನವೆಂದರೆ ಶಕವರ್ಷ ೧೩೩೪ ದುಂದುಂಭಿ ಸಂವತ್ಸರ ಮಾಗಶೀರ್ಷಶುದ್ಧ ೬ ರವಿವಾರದಂದು ಹುಟ್ಟಿದ ಶಾಸನ ಎಂದರೆ ಕ್ರಿ.ಶ.೧೪೧೨ರ ಚಟ್ಟಿಹಬ್ಬದ ಭಂಡಾರ ಪೂಜೆಯ ಮಿತಿಯನ್ನು ಇದು ಸೂಚಿಸುತ್ತದೆ"[೧೧] ಈ ಶಾಸನ ಕಾಲಕ್ಕಾಗಲೇ ಈ ಮೈಲಾರಲಿಂಗ ದೇವರ ಆರಾಧನೆಯಲ್ಲಿ 'ಭಂಡಾರ ಚಟ್ಟಿ(ಮಾರ್ಗ ಶು>ಚಟ್ಟಿ)ಯ ಹಬ್ಬ ಪ್ರಾಮುಖ್ಯತೆ ಪಡೆದಿತ್ತೆಂದು ಕೂಡ ತಿಳಿಯುವಂತಾಗುತ್ತದೆ.

"ಮೈಲಾರ ಲಿಂಗದೇವಾಲಯದ ರಂಗಮಂಟಪದಲ್ಲಿನ ಎತ್ತರ ಕಂಬದ ಮೇಲೆ ಕೆತ್ತಲಾಗಿರುವ ಕ್ರಿ.ಶ.೧೪೩೬ರ ಕನ್ನಡ ಶಾಸನದಲ್ಲಿ 'ಉಂಗುರಲಾದ ಶ್ರೀಮನ್ಮಹಾಮಯಿಲಾರ ದೇವರು' ಎಂಬ ಉಲ್ಲೇಖ ಬಂದಿರುವುದು ಇಲ್ಲಿ ತುಂಬಾ ಗಮನಾರ್ಹವಾಗಿದೆ ಎಂದು ಎಂ.ಬಿ. ನೇಗಿನಹಾಳ ಅವರು ಉಲ್ಲೇಖಿಸಿದ್ದಾರೆ. ಸದ್ಯ ಮೈಲಾರ ಎಂದು ಕರೆಯಲಾಗುವ ಊರು ಮುಂದೆ ಉಂಗುಲಾಲ ಎದ್ದಿತೆಂಬ ಅಂಶ ಸ್ಪಷ್ಟವಾಗುತ್ತದೆ. ಒಡೆಯರ ಮನೆತನದವರು ಬಳಸುವ ಶ್ರೀಮುಖ ಅಥವಾ ಬಿರುದಾವಳಿಯಲ್ಲಿ ಕೂಡ ಕಾಣಬಹುದಾಗಿದೆ. ಶ್ರೀ ಮುಖವನ್ನಿಲ್ಲಿ ನೋಡಬಹುದು.

**ಒಡೆಯರ್ :**

"ಶ್ರೀ ಮನ್ಮಹಾಕಪಿಲ ಮುನಿ' ಕಲಿಮೈಲಾರ ಸಿಂಹಾಸನಕ್ಕಿಧೀಪತಿಗಳಾದ ಕರಿಯೆಳಿ ಬಂಡಾರಕ್ಕೆ ಕಾರಣಕರ್ತರಾದ ಆಚಾರ-ವಿಚಾರಕ್ಕೆ ಅಗ್ರಗಣ್ಯರಾದ... ಮೈಲಾರದ ಒಡೆಯರ್ ಸ್ವಾಮಿಗಳವರ..."[೧೨]

ಎಂಬ ಒಕ್ಕಣಿಯು ಉಲ್ಲೇಖ ಕಾಣಬಹುದಾಗಿದೆ. ಇಂದಿಗೂ ತಮ್ಮ ಪತ್ರವ್ಯವಹಾರದಲ್ಲಿ ಬಳಸುವ ಈ ಸಂಪ್ರದಾಯದ ಗುರುಮನೆತನದವರಾಗಿರುವ ಒಡೆಯರ್ ಎಂಬ ವಿಶಿಷ್ಟ ಪುರೋಹಿತ್ ವರ್ಗವೊಂದು ಈ ಭಂಡಾರ ಸಂಪ್ರದಾಯದಲ್ಲಿ ಅಚ್ಚುತ್ತ ಸ್ಥಾನದಲ್ಲಿದೆ. ಹಿರೇ ಮೈಲಾರದೊಡೆಯರು ಎಲ್ಲಾ ಬುಡಕಟ್ಟು ಜನಾಂಗಗಳಿಗೂ ಗುರುಗಳಾಗಿದ್ದಾರೆ. ಒಡೆಯರ್ ಗೋಮುನಿ ವಂಶಸ್ಥರಿಗೆ ವಂಶಪಾರಂಪರಿತವಾದ ಗುರುಸ್ಥಾನ ಲಭ್ಯವಿದೆ.

"ಕ್ರಿ.ಶ. ೧೬೪೦ರಲ್ಲಿ ಚಿತ್ರದುರ್ಗದ ಗೌರವಾನ್ವಿತ ರಾಜಶ್ರೀ ಬಿಚ್ಚುಗತ್ತಿ ಭರಮಣ್ಣ ನಾಯಕರು ಶ್ರೀ ಸ್ವಾಮೀಯವರಿಗೆ ಪಂಚಾಲೋಹದ ಭಂಡಾರದ ಬಟ್ಟಲನ್ನು ಶ್ರದ್ಧಾ ಭಕ್ತಿಯಿಂದ ಕೊಟ್ಟಿರುತ್ತಾರೆ"[೧೩] ಎಂದು ಉಲ್ಲೇಖವು ಶ್ರೀ ಕೃಷ್ಣಪ್ಪನವರು ಬರೆದಿರುವ ಶ್ರೀಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತದಲ್ಲಿ ಕಾಣಬಹುದಾಗಿದೆ. ಇಂದಿಗೂ ಸಹ ಅದು ವಂಶಪರ್ಯಾವಾಗಿ ಉಳಿದುಕೊಂಡು ಬಂದಿದೆ. ಅದರ ಸುತ್ತಲೂ ದೇವತೆಗಳ ಚಿತ್ರಗಳನ್ನು ಕೆತ್ತಲಾಗಿದೆ.

ಹಿರೇಮೈಲಾರ-ದೇವರ ಗುಡ್ಡಗಳ ಒಡೆಯರು ಭೂಲೋಕದಲ್ಲಿ ಮೊದಲು ಭಂಡಾರ ಸಿದ್ಧಮಾಡಿದವರು ತಾವೇ ಎಂದು ಹೇಳುತ್ತಾರೆ. ಭಂಡಾರ ಎಲ್ಲಿದೆಯೋ ಅಲ್ಲೆಲ್ಲಾ ನಾವೇ ಗುರುಗಳೆಂದು ಅದು ಇಲ್ಲದಿದ್ದರೆ ಗುರುತ್ವ ಇಲ್ಲವೆಂದು ಅವರ ನಂಬಿಕೆಯಾಗಿದೆ.

ಭಂಡಾರ ಬಟ್ಟಲಿನಿಂದಲೇ ಶ್ರೀ ಗುರುಗಳು ಭಕ್ತರಿಗೆ ಛಟ್ಟಿ ಭಂಡಾರವನ್ನು ಪ್ರಸಾದರೂಪವಾಗಿ ಎಲ್ಲರಿಗೂ ಕೊಡುವುದರಲ್ಲದೇ ಭಕ್ತರ ಹಣೆಗಿಟ್ಟು ಆಶೀರ್ವದಿಸುತ್ತಾರೆ. ಗೊರವರಿಗೆ ದೀಕ್ಷೆ ನೀಡುವುದು ಅಥವಾ ಹೊರೆ ಹೊರೆಸುವುದು, ಕಾರ್ಣಿಕಕ್ಕೆ ಅಪ್ಪಣೆ ಕೊಡುವುದು ಇವೆಲ್ಲಾ ಒಡೆಯರ ಸಮ್ಮುಖದಲ್ಲಿ ಮತ್ತು ಅವರ ಭಂಡಾರ ಬಟ್ಟಲು ಪರಂಪರೆಯಿಂದ ನಡೆಯುತ್ತದೆ. ಒಡೆಯರು ಈ ಸಂಪ್ರದಾಯದ ಕೇಂದ್ರಬಿಂದುವಾಗಿ ಕಂಡುಬರುತ್ತಾರೆ. ಒಡೆಯರ್‌ಗೆ ಸಂಬಂಧಿಸಿದ ಐತಿಹ್ಯ, ಪುರಾಣ, ನಂಬಿಕೆಗಳು ಏನೇ ಇದ್ದರೂ ಪ್ರಸ್ತುತ ದಿನಗಳಲ್ಲಿ ಈ ಭಂಡಾರ ಸಂಪ್ರದಾಯದಲ್ಲಿ ಅತ್ಯುನ್ನತ ಗೌರವ ಇವರಿಗೇ ದೊರೆಯುತ್ತದೆ.

ಪ್ರಸ್ತುತ ಹಿರೇ ಮೈಲಾರದಲ್ಲಿ ಶ್ರೀ ಗುರುವೆಂಕಪಯ್ಯ ಒಡೆಯರ್ ಮತ್ತು ಶ್ರೀ ಗುರುಮಾತೆ ಪಾರ್ವತಮ್ಮ ನಮ್ಮವರ ಪರಂಪರೆ ಕಾಣಬಹುದಾಗಿದೆ. ಒಡೆಯರ ಆಚರಣೆ ಕ್ಷತ್ರಿಯರಂತೆ ಇದೆ ಎಂದು ಕೃಷ್ಣಪ್ಪನವರು ತಿಳಿಸುತ್ತಾರೆ. ಭಂಡಾರಿಗಳು ಮತ್ತು ಗಣಾಚಾರಿಗಳು ಒಡೆಯರಂತೆ ಗಣಾಚಾರಿಗಳು ದೀಕ್ಷೆಯನ್ನು ಗೊರವರಿಗೆ ನೀಡುತ್ತಾರೆ. ಇವರು ಒಡೆಯರಿಗೆ ಗೌರವದಿಂದ ಕಾಣುತ್ತಾರೆ.

೨. ಶಿಲ್ಪಕಲೆ :

"ಮೈಲಾರ ಮತ್ತು ದೇವರಗುಡ್ಡಗಳಲ್ಲಿರುವ ಸ್ವಯಂಭೂಲಿಂಗಗಳ ಹಿಂಭಾಗದಲ್ಲಿ ಪೀಠದ ಮೇಲೆ ಕುಳಿತಿರುವಂತೆ ರಚಿಸಿದ ದೇವತಾ ಮೂರ್ತಿಗಳಿವೆ. ಸ್ವಯಂಭೂಲಿಂಗಗಳಿಗೆ ಇಲ್ಲಿ ಹೆಚ್ಚಿನ ಪ್ರಾಧಾನ್ಯವಿದೆ. ಅಭಿಷೇಕಾದಿಗಳು ಜರುಗುವುದು ಸ್ವಯಂ ಭೂಲಿಂಗಗಳಿಗೇ ಮೈಲಾರದ ಮೂರ್ತಿಯ ಚತುರ್ಭುಜಗಳಲ್ಲಿ ಬಲಗಡೆಗೆ ಖಡ್ಗ ತ್ರಿಶೂಲಗಳು ಎಡಗೈಗಳಲ್ಲಿ ಡಮರು ಮತ್ತು ಪಾನಪಾತ್ರೆಗಳೂ ಇವೆ. ಮೈಮೇಲೆ ಸರ್ಪಾಭರಣಗಳಿದ್ದು ಜಡೆಯನ್ನು ಸುತ್ತಿ ಕಟ್ಟಿದಂತಿದ್ದು ಅದಕ್ಕೂ ಸರ್ಪವೊಂದನ್ನು ಕಟ್ಟಲಾಗಿದೆ. ಮೈಲಾರದಲ್ಲಿನ ಮೂರ್ತಿ ಮಣ್ಣಿನದಾಗಿದೆ ಎಂತಲೆ ಅದನ್ನು ಮಣ್ ಮೈಲಾರ ಎಂದು ಕರೆಯುವುದು ರೂಢಿಯಾಗಿದೆ. ದೇವರ ಗುಡ್ಡದಲ್ಲಿರುವ ಮೂರ್ತಿ ಸಾಮಾನ್ಯವಾಗಿ ಇದೇ ತೆರನಾಗಿದೆ"[೧೪] ಎಂದು ನೇಗಿನಹಾಳರವರು ನೇಗಿನಹಾಳ ಪ್ರಬಂಧದಲ್ಲಿ ಉಲ್ಲೇಖಿಸಿದ್ದಾರೆ.

"ಮಲ್ಲಾರಿ ಸಹಸ್ರನಾಮದಲ್ಲಿ ಬರುವ ಧ್ಯಾನಶ್ಲೋಕ ಮತ್ತು ಸ್ತುತಿಗಳಂತ ದೇವರಮೂರ್ತಿ ಸ್ವರೂಪವನ್ನು ವರ್ಣಿಸಲಾಗಿದೆ.

"ಖಡ್ಗಂ ಕಪಾಲಂ ಢಮರುರಿ ತ್ರಿಶೂಲಂ
ಭುಜೈಶ್ಚರ್ಭಿಚತುರಂ? ಹಂತಂ।
ಆಶೇಷು ಸಂಪತ್ಸುಖದಾಯಿಕಾಕ್ಷಂ।
ಮಲ್ಲಾರಿನಾಥಂ ಮನಸಾ (ನಮಹಿ) ಸ್ಮರಾಮಿ"

ಮೈಲಾರನಿಗೆ ಚತುರ್ಭುಜಗಳು ಅವುಗಳಲ್ಲಿ ತ್ರಿಶೂಲ ಡಮರು ಖಡ್ಗಗಳು ಶೋಭಿಸುತ್ತವೆ. ಇನ್ನೊಂದು ಕೈಯು ಮರದ ಹಸ್ತವೆಂದು ಒಂದು ಕಡೆ ಹೇಳಿದ್ದರೆ ಕಪಾಲವಿರುವುದಾಗಿ ಮತ್ತೊಂದರಲ್ಲಿ ಹೇಳಿದೆ. ಮೈಗೆ ನಾಶಚೂರ್ಣ ಅಂದರೆ ಅರಿಶಿನದಿಂದ ತೊಡೆದು ಕನಕಗಿರಿಯಂತೆ ಶೋಭಾಯಮಾನವಾಗಿ ತೋರುತ್ತಾನೆ. ಶ್ವೇತಹಯಾರೂಢನಾಗಿದ್ದು ಪಾದವನ್ನು ದೈತ್ಯದ ಶಿರದ ಮೇಲೆ ಇಟ್ಟುಕೊಂಡಿದ್ದಾನೆ. ಸುತ್ತಲೂ ಭಯಂಕರವಾದ ಶ್ವಾನಗಳು ಸುತ್ತುವರಿದಿವೆ. ದಾನವನ್ನು ವಧಿಸಿ ಶರಣಾಗತರನ್ನು ರಕ್ಷಿಸಲೋಸುಗ ಕಲ್ಯಾಣಕಾರಕನಾದ ಸಾಕ್ಷಾತ್-ಶಂಕರನು ಮೈಲಾರದ ರೂಪ ತಾಳಿ ಆವತರಿಸಿ ಬಂದಿದ್ದಾನೆ. ಇದು ಒಟ್ಟು ಮೈಲಾರಲಿಂಗನನ್ನು ಕುರಿತಂತೆ ಇರುವ ಸ್ವರೂಪವಾಗಿದ್ದು ಇದರಲ್ಲಿ ವಿಶೇಷವಾಗಿ ಭಂಡಾರದ ವಿಷಯ ತಿಳಿಯಬಹುದಾಗಿದೆ. ಮತ್ತು ಗ್ರಾಂಥಿಕವಾದ ಪರಂಪರೆಯನ್ನು ಗುರುತಿಸಬಹುದಾಗಿದೆ"[೧೫] ಇನ್ನೂ ಮಹಾರಾಷ್ಟ್ರದ, ಜಜೂರಿ ಕ್ಷೇತ್ರವು ಈಗ ಬಹು ಪ್ರಸಿದ್ಧವಾಗಿದೆ. ಪುಣೆಯ ಆಗ್ನೇಯಕ್ಕೆ ಸುಮಾರು ೨೦ ಮೈಲುಗಳ ಮೇಲೆ ಒಂದು ಗುಡ್ಡದ ಮೇಲೆ ದೇವಸ್ಥಾನವಿದ್ದು ಈ ದೇವಸ್ಥಾನವೂ ಸಾಕಷ್ಟು ಪ್ರಾಚೀನವಾಗಿದೆ.

ಅಲ್ಲಿರುವ ಒಂದು ಶಿಲಾಶಾಸನವು ಹದಿಮೂರನೇ ಶತಮಾನದ್ದಾಗಿದೆ. ಅದರಲ್ಲಿ ದೇವಸ್ಥಾನ ಮತ್ತು ಕ್ಷೇತ್ರಾಧಿಪದೈವದ ಖಚಿತತೆ ಇಲ್ಲ. ಆದರೂ ಶಾಸಕಾಲಕ್ಕಾಗಲೇ ದೇವಸ್ಥಾನವು ಅಸ್ತಿತ್ವದಲ್ಲಿರಬೇಕೆಂದು ವಿದ್ವಾಂಸರೂ ಊಹಿಸಿದ್ದಾರೆ.

"ಸ್ವಯಂಭೂಲಿಂಗ ಮತ್ತು ಆನಂದಾಸನದಲ್ಲಿರುವ ಖಂಡೋಬಾ ಅಥವಾ ಮಾರ್ತಾಂಡ ಭೈರವನ ಕಪ್ಪ ಶಿಲೆಯ ಮೂರ್ತಿಯಿದೆ. ಈ ಮೂರ್ತಿಯ ಕೈಯಲ್ಲಿ ಕ್ರಮವಾಗಿ ಖಡ್ಗ ತ್ರಿಶೂಲ ಡಮರು ಮತ್ತು ಪಾನಪಾತ್ರಗಳಿವೆಯೆಂದು ಹೇಳುತ್ತಾರೆ. ಪಾನಪಾತ್ರವೊಂದನ್ನುಳಿದು ಉಳಿದ ಮೂರು ಕೈಗಳಲ್ಲಿ ಚಿಹ್ನೆಗಳಿಲ್ಲವಾಗಿದೆ"[೧೬]

"ಗಂಗಿಮಾಳವ್ವ(ಮಾಳಚಿ) ಮೈಲಾರ ದೇವರ ಗುಡ್ಡಗಳಲ್ಲಿ ಈಗಿರುವ ಮಾಳಚಿಯ ಮೂರ್ತಿಗಳು ಮೈಲಾರಲಿಂಗನ ತದ್ವತ್ತಾದ ಸ್ತ್ರೀಮೂರ್ತಿಗಳಾಗಿವೆ ಎಂದರೆ ಬಲದಕೈಗಳಲ್ಲಿ ಖಡ್ಗ, ತ್ರಿಶೂಲಗಳೂ ಎಡದ ಕೈಯಲ್ಲಿ ಪಾನಪಾತ್ರ ಡಮರುಗಳೂ ಕಂಡುಬರುತ್ತವೆ. ಮಾಳಚಿ(ಗಂಗಿ ಮಾಳವ್ವ) ಮೈಲಾರಲಿಂಗನ 'ಪಟ್ಟದ ಹೆಂಡತಿ' ಆದ್ದರಿಂದ ಮೈಲಾರಲಿಂಗನ ದೇವಾಲಿಗಳ ಪಕ್ಕದಲ್ಲಿಯೇ ಅವಳ ದೇವಾಲಯಗಳಿವೆ. ಜೊತೆಗೆ ಮೂರ್ತಿಯ ಮುಂದುಗಡೆಯಲ್ಲಿ ಉದ್ಭವಲಿಂಗಗಳಿವೆ"[೧೭]

ದೇವಿ ಹೊಸೂರಿನಲ್ಲಿ ಮಾಳಚಿ ಕ್ರಿ.ಶ.೧೦೬೩ರ ಶಾಸನ ಉಲ್ಲೇಖ ಶಿಲ್ಪವನ್ನು ಮತ್ತು ಸ್ತ್ರೀವಿಗ್ರಹಗಳಿವೆ. ಈ ವಿಗ್ರಹ ಚತುರ್ಭುಜವಾಗಿದ್ದು ಇವುಗಳ ಕೈಯಲ್ಲಿ ಕ್ರಮವಾಗಿ ಖಡ್ಗ, ಡಮರು, ತ್ರಿಶೂಲ ಮತ್ತು ಪಾನಪಾತ್ರಗಳಿವೆ"[೧೮] "ಯಾತಗಿರಿ ಮಲ್ಲಯ್ಯ ಶಾಸನಗಳಲ್ಲಿ 'ಏತಗಿರಿ' ಈ ಯಾತಗಿರಿ ಯಾದಗಿರಿ ಮುಂತಾಗಿ ಉಚ್ಚರಿಸಲ್ಪಡುತ್ತವೆ. ಒಂದಂಕಣ. ಈ ಗುಡಿಯ ಒಳಗೆ ಖಡ್ಗ ತ್ರಿಶೂಲ ಡಮರು ಮತ್ತು ಪಾನಪಾತ್ರಗಳನ್ನು ಹಿಡಿದಿರುವ ಶಿಲಾಮೂರ್ತಿಯಿದೆ. ದೇವಿ ಸಿದ್ದಾಸನದಲ್ಲಿ ಕುಳಿತಿದ್ದಾಳೆ. ಅಡಿಯಲ್ಲಿ ನರಶಿರವೊಂದನ್ನು ಕೊರೆಯಲಾಗಿದೆ. ಈ ಮೂರ್ತಿ ಪ್ರಾಚೀನವಾದಂತೆ ತೋರುತ್ತದೆ"[೧೯] ಎಂದು ನೇಗಿನಹಾಳ ಅವರು ತಿಳಿಸಿದ್ದಾರೆ.

ಪಾನಪಾತ್ರ ಅಥವಾ ಪಾನಬಟ್ಟಲು ವಿಶೇಷವಾಗಿ ಮೈಲಾರಲಿಂಗನ ಎಡದ ಮುಂಗೈಯಲ್ಲಿ ಬಟ್ಟಲೊಂದನ್ನು ಹಿಡಿದಿರುವುದು ಶಿಲ್ಪಗಳಲ್ಲಿ ಕ್ರಮೇಣವಾಗಿ ಕಾಣುತ್ತವೆ. ಇದಕ್ಕೆ ಪಾನಬಟ್ಟಲು ಎಂದು ಹೆಸರು. ಮೂರ್ತಿ ದ್ವಿಭುಜವಾಗಿದ್ದರೆ ಆಗ ಡಮರುಗದ ಬದಲು ಈ ಬಟ್ಟಲಿಗೆ ಪ್ರಾಧಾನ್ಯತೆ ಸಲ್ಲುತ್ತದೆ. ಇಂಥ ಮೂರ್ತಿಗಳು ಕಾರಿಮನಿ, ದೇವರ ಹಿಪ್ಪರಿಗೆ, ಪ್ರೇಮಪುರ ಮುಂತಾದ ಗ್ರಾಮಗಳಲ್ಲಿ ಕಂಡುಬರುತ್ತವೆ. ಗಂಗಿ ಮಾಳವ್ವ ಹೆಗ್ಗಡೆ ಮುಂತಾದ ಇತರೆ ದೇವತೆಗಳ ಎಡಗೈಗಳಲ್ಲಿಯು ಈ ಬಟ್ಟಲೊಂದು ಇದ್ದೇ ಇರುತ್ತದೆ ಎಂದು ಈ ಬಟ್ಟಲನ್ನು ನೇಗಿನಹಾಳರವರು ಮೈಲಾರನ ಖಂಡೋಬ ಕೃತಿಯಲ್ಲಿ ತಿಳಿಸಿದ್ದಾರೆ.

"ಮಹಾರಾಷ್ಟ್ರದ ಲೇಖಕರು 'ಪಾನಪಾತ್ರೆ' ಎಂದು ಎಲ್ಲೆಡೆ ಹೆಸರಿಸಿದ್ದಾರೆ. ಕಾಳಿ, ದುರ್ಗೆ, ಚೌಡಮ್ಮ ಮುಂತಾದ ದೇವತೆಗಳ ಕೈಯಲ್ಲಿ ಕೂಡ ಇಂಥದೊಂದು ಸಂಕೇತವಿರುತ್ತದೆ. ಅದನ್ನು ಪಾನಪಾತ್ರವೆಂದು ಕರೆಯುವುದು ಸಾಮಾನ್ಯವಾದ ಪದ್ಧತಿ ಪ್ರಸ್ತುತ ಸಂಪ್ರದಾಯದಲ್ಲಿ ಅದನ್ನು ಹೇಳುವುದು ಸಮಂಜಸವಾಗಿ ಕಂಡುಬರುತ್ತದೆ. ಅನೇಕ ಕಡೆ ಮೂರ್ತಿಗಳ ಕೈಯಲ್ಲಿ ಕಂಡುಬರುವ ಈ ಸಂಕೇತ ತುಂಬಾ ಚಿಕ್ಕದಾಗಿದೆ. ಮೂರ್ತಿ ಮನುಷ್ಯ ಪ್ರಮಾಣದಿದ್ದರೂ ಈ ಪಾತ್ರೆ ಅದಕ್ಕೆ ತಕ್ಕ ಗಾತ್ರದಲ್ಲಿ ಇಲ್ಲದಿರುವುದು ಎದ್ದು ಕಾಣುವ ಅಂಶ ಜೆಜೂರಿಯಲ್ಲಿರುವ ಹೆಗ್ಗಡೆಯ ಮೂರ್ತಿಗಳು ಪ್ರೇಮಪುರದಲ್ಲಿಯ ಮುಖ್ಯಮೂರ್ತಿ ಮತ್ತು ಶಿಲೆಯ ಪ್ರಾಚೀನ ಹೆಗ್ಗಪ್ಪನಮೂರ್ತಿ ಇವುಗಳ ಕೈಯಲ್ಲಿರುವ ಬಟ್ಟಲುಗಳನ್ನು ನೋಡಿದರೆ ಅದನ್ನು ಪಾನಪಾತ್ರ ಎಂದು ಕರೆಯಲು ಸಾಧ್ಯವಿಲ್ಲ"[೨೦] ಎಂದು ನೇಗಿನಹಾಳರವರು ತಿಳಿಸಿದ್ದಾರೆ. ಅಲ್ಲದೇ ಅವರು "ಹಿರೇಮೈಲಾರ–ದೇವರ ಗುಡ್ಡಗಳಲ್ಲಿರುವ ಒಂದು ವಿದ್ಯಮಾನ. ಇಲ್ಲಿ ಗಮನಾರ್ಹವಾಗಿದೆ. ಇವೆರಡು ದೇವಾಲಯಗಳ ಒಡೆಯರಲ್ಲಿ ವಂಶಪರಂಪರೆಯಿಂದ ಬಂದ ಭಂಡಾರದ ಒಂದೊಂದು ಬಟ್ಟಲುಗಳಿವೆ. ಬಂದ ಭಕ್ತರಿಗೆ ಅವರು ಈ ಭಂಡಾರ ಬಟ್ಟಲಿನ ಸಂಕೇತವೇ ಮೂರ್ತಿಗಳ ಕೈಯಲ್ಲಿ ಉಳಿದು ಬಂದಂತೆ ತೋರುತ್ತದೆ. ಪ್ರಸ್ತುತ ಒಡೆಯರು ದೇವರ ಕೈಯಲ್ಲಿರುವ ಬಟ್ಟಲು ಭಂಡಾದ ಬಟ್ಟಲೇ ಹೊರತು ಪಾನಪಾತ್ರವೆಂದು ಹೇಳುತ್ತಾರೆ. ಒಟ್ಟಾರೆ ಭಂಡಾರ ಬಟ್ಟಲು ಮೂರ್ತಿಗಳಲ್ಲಿ ಸಾಂಕೇತಿಕ ದೃಷ್ಟಿಯಿಂದ ತೋರುವಂತಹ ಬಟ್ಟಲುಗಳಾಗಿವೆ"[೨೧] ಎಂದು ನೇಗಿನಹಾಳರವರು ಮೈಲಾರ ಮತ್ತು ಖಂಡೋಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಈ ಶಿಲ್ಪಕಲೆಗಳ ಮೂಲಕ ಪಾನಪಾತ್ರೆಯನ್ನು ಭಂಡಾರ ಬಟ್ಟಲೆಂದು ಗುರುತಿಸಬಹುದಾಗಿದೆ. ಭಂಡಾರ ಬಟ್ಟಲು ಸಂಸ್ಕೃತಿಯನು ಪ್ರಾಚೀನ ಕಾಲದಿಂದಲೂ ಉಲ್ಲೇಖಿಸಬಹುದಾಗಿದೆ.

### III. ಜನಪದ ಸಾಹಿತ್ಯ :

ಭಾರತ ದೇಶ ಹಲವಾರು ಜನ ಸಮುದಾಯಗಳ ಆಗರವಾಗಿದೆ. ದೇಶದ ಪ್ರತಿಯೊಂದು ಜನ ಸಮುದಾಯಗಳಿಗೆ ತನ್ನದೇ ಆದ ವಿಶಿಷ್ಟವಾದ ಸಾಂಸ್ಕೃತಿಕ ಮೌಖಿಕ ಪರಂಪರೆ ಇರುವಂತೆ ಕುರುಬ ಅಥವಾ ಹಾಲುಮತಸ್ಥರಿಗೂ ತನ್ನದೇ ಆದ ಸಾಂಸ್ಕೃತಿಕ ಮೌಖಿಕ ಪರಂಪರೆ ಇದೆ. ಇವರ ಸಾಂಸ್ಕೃತಿಕ ಪರಂಪರೆಯನ್ನು ತಿಳಿಯಲು ಜನಪದ ಮಹಾಕಾವ್ಯ ಡೊಳ್ಳಿನ ಹಾಡುಗಳು, ಮೈಲಾರಲಿಂಗನ ಕಾರ್ಣಿಕ, ರಟ್ಟಮತಶಾಸ್ತ್ರ, ಒಡೆಯರ ಹೇಳಿಕೆಗಳ ಟಗರಪವಾಡ ಹಾಗೂ ಇವರ ಕುರಿತಾಗಿರುವ ಕತೆಗಳು ಮತ್ತು ಒಡಪು ಗಾದೆಯ ಮಾತುಗಳು ಆಧಾರವಾಗಿ ನಿಲ್ಲುತ್ತವೆ. ಭಂಡಾರ ಕುರಿತು ಮೌಖಿಕ ಉಲ್ಲೇಖಗಳನು ಇಲ್ಲಿ ದಾಖಲಿಸಲಾಗಿದೆ.

**೧. ಒಡಪು :** 'ಒಡಪು' ಪದವನ್ನು ಸಾಮಾನ್ಯರು 'ಒಗಟು' ಪದವನ್ನು ಸುಶಿಕ್ಷಿತರು ಪ್ರಯೋಗಿಸುತ್ತಾರೆ. ಒಗಟು ವಿನೋದ ಪ್ರಸಂಗ, ಶ್ರಮ ಪರಿಹಾರ ಪ್ರಸಂಗದಲ್ಲಿ ಬಳಕೆಯಾದರೆ, ಒಡಪು ಮಂಗಲಪ್ರಸಂಗದಲ್ಲಿ ಬಳಕೆಯಾಗುತ್ತದೆ. ಒಡಪುಗಳಲ್ಲಿ ದೇವರ ವೇಷಭೂಷಣಗಳ ವರ್ಣನೆಯನ್ನು ಒಳಗೊಂಡಿರುತ್ತದೆ.

ಮೈಲಾರಲಿಂಗನ ಭಂಡಾರ ಕುರಿತು ಒಡಪುಗಳನ್ನು ಕಾಣಬಹುದಾಗಿದೆ. ಖಡ್ಗ ಡಮರುಗ, ರುದ್ರಾಕ್ಷಿ, ಕವಡೆ, ಭಂಡಾರಗಳು ಮುಂತಾದ ವೇಷಭೂಷಣಗಳನ್ನು ಒಡಪು ಮುಖಾಂತರ ವರ್ಣಿಸಲಾಗುತ್ತದೆ.

"ಗಾಜಿನಲ್ಲಿ ಗಟ್ಟಿಗಳು, ಮುತ್ತಿನಲ್ಲಿ ರಂಗವಾಲಿಗಳು, ಬೋಗದಲ್ಲಿ ಭಂಡಾರಗಳು, ರುದ್ರಾಕ್ಷಿಯಲ್ಲಿ ತೆನೆಗಳು, ಕವಡಿಯಲ್ಲಿ ಕೋಟೆಗಳು, ಅಂತಂಬರ ಕೋಟೆಗೆ ಕಾವಲು ಯಾರೆಂದರೆ ಮುಕ್ಕಣ್ಣ"[೨೨] ಈ ರೀತಿಯಾಗಿ ಮೈಲಾರಲಿಂಗನ ಭಕ್ತರಾದ ಕಾಂಚಾವೀರರು ಹೇಳುತ್ತಾರೆ. ಕೆಲವೊಮ್ಮೆ ಭಂಡಾರದ ಬಟ್ಟಲು ಒಡೆಯರ ಸಮ್ಮುಖದಲ್ಲಿ ಕೂಡ ಒಡಪುಗಳನ್ನು ಹೇಳಲಾಗುತ್ತದೆ.

**೨. ಪದ್ಯ ಸಾಹಿತ್ಯ :** ಹಾಲುಮತಸ್ಥರ ಅಥವಾ ಕುರುಬರ ಆರಾಧ್ಯ ದೈವಗಳಾದ ಮೈಲಾರಲಿಂಗ, ಬೀರಪ್ಪ, ಮಾಳಿಂಗರಾಯ, ಅಮೋಘಸಿದ್ಧ, ಮಾಯವ್ವ, ರೇವಣಸಿದ್ಧ ಮುಂತಾದ ದೈವಗಳಿಗೆ ಡೊಳ್ಳಿನ ಹಾಡುಗಳ ಮುಖಾಂತರ ಸ್ಮರಿಸುತ್ತಾರೆ. ಇದು ಒಂದು ಪದ್ಯಸಾಹಿತ್ಯದ ರೂಪದಲ್ಲಿ ಕಂಡುಬರುತ್ತದೆ. ಅಲ್ಲದೇ ಕುರುಬರೇ ವಿಶೇಷವಾಗಿ ಈ ಡೊಳ್ಳಿನ ಹಾಡುಗಳು ಹೇಳುತ್ತಾರೆ.

ಇವರಿಗೆ "ಕಲಾಪ್ರದರ್ಶನಕ್ಕೆ ಮುಂಚಿತವಾಗಿ ಮೇಳದ ಮುಖಂಡರಿಗೆ ಭಂಡಾರಹಚ್ಚಿ, ವೀಳ್ಯಕಾಯಿಕೊಟ್ಟು ಭಿನ್ನವಿಸಿಕೊಳ್ಳಲಾಗಿತ್ತದೆ. ಭಿನ್ನಹವನ್ನು ಒಪ್ಪಿಕೊಳ್ಳುವುದರ ಸಂಕೇತವಾಗಿ ಮೇಳದ ಮುಖಂಡ ಭಂಡಾರವನ್ನು ಹಿಡಿಯುತ್ತಾನೆ. ಭಂಡಾರ ಹಿಡಿದ ಮೇಲೆ ಕಲಾಪ್ರದರ್ಶನವನ್ನು ತಪ್ಪಿಸುವಂತಿಲ್ಲ"[೨೩] ಎಂದು ಲಿಂಗದಹಳ್ಳಿ ಹಾಲಪ್ಪನವರು ಹೇಳುತ್ತಾರೆ.

ಬೀರಪ್ಪನ ಪಲ್ಲಕ್ಕಿ ಬರುವಾಗ ಜನಪದ ಹಾಡನ್ನು ಗಂಗೆ ಪೂಜೆಪದವೆಂದು ಹಾಡುತ್ತಾರೆ.

"ನಿಮ್ಮ ಮಗ ಬೀರಪ್ಪನೋ
ಗಂಗಿ ನೆನಿಯಲಿ ಬಂದಾನ
ಗಂಗಿ ನೆನಿಯಲಿ ಬಂದಾನೋ।
ಗಂಗಿ ಜವ ಇಲ್ಲೇನ।
ಮಳಲಿ ಐದ ಗುಂಪಿಯ ಮಾಡಿ
ಗಂಧ ಬಂಡಾರ ಹಚ್ಯಾರ
ಆದರಾದ ಐದ ಅಡಕಿ ಇಟ್ಟಾರ"[೨೪]

"ಉತ್ತರ ಕರ್ನಾಟಕದ ಬಹುತೇಕ ಹಳ್ಳಿಗಳಲ್ಲಿ ಹಾಲುಮತಸ್ಥರು ತಮ್ಮ ಸಮಾರಂಭಗಳಿಗೆ ಸ್ವಾಮಿಯನ್ನಾಗಲಿ, ಆಚಾರ್ಯರನ್ನಾಗಲಿ ಕರಿಸುವುದಿಲ್ಲ. ಬೀರದೇವರ ಇಲ್ಲವೆ ಕರಿದೇವರ ಪೂಜಾರಿಯು ಮದುಮಕ್ಕಳುಗಳನ್ನು ದೇವರ ಸತ್ತಿಗೆ ನೆರಳಲ್ಲಿ ನಿಲ್ಲಿಸಿ ಬಾಸಿಂಗಕಟ್ಟಿ ಹಣೆಗೆ ಭಂಡಾರವನ್ನು ಹಚ್ಚಿ ಡೊಳ್ಳಿನ ಮೇಳದವರೊಂದಿಗೆ ಅವರು ಹಾಡುತ್ತಾರೆಂದು"[೨೫] ಸಿದ್ದಣ್ಣ ಜಕಬಾಳ 'ಮೌಖಿಕ ಆಕರಗಳು' ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಒಟ್ಟಾರೆ ಡೊಳ್ಳಿನ ಹಾಡುಗಳು ಕುರುಬರ ಪುರಾಣ ಇತಿಹಾಸದಲ್ಲಿ ಭಂಡಾರದ ವಿಷಯಗಳನ್ನು ತಿಳಿಸಿಕೊಡುವ ಪಾರಂಪರಿಕ ಮೌಖಿಕ ಆಕರಗಳಾಗಿವೆ. ಇವು ಇವರ ಬದುಕಿನ ಪ್ರತಿಬಿಂಬವಾಗಿದೆ.

**ಹಾಲುಮತ ಪುರಾಣಗಳು :**

ಹಾಲುಮತದವರ ಕುರಿತಾದ ಅನೇಕ ಜನಪದ ಕಾವ್ಯಗಳು ದೊರೆಯುತ್ತವೆ. ರಸ್ತಾಪುರ ಭೀಮಕವಿಯ ಹಾಲ್ಮತೋತ್ತೇಜಕ ಪುರಾಣ, ಎಂ.ಎಂ.ಚನ್ನಬಸವಶಾಸ್ತ್ರಿಗಳ ಹಾಲುಮತಪುರಾಣವು ಡಾ.ವೀರಣ್ಣ ದಂಡೆಯವರಿಂದ ಸಂಪಾದಿಸಲ್ಪಟ್ಟ ಜನಪದ ಹಾಲುಮತ ಮಹಾಕಾವ್ಯ ಡಾ.ಮಂಜುನಾಥ ಬೇವಿನಕಟ್ಟಿ ಅವರು, ಮೈಲಾರ ಲಿಂಗನಕಾವ್ಯ, ಅಲ್ಲದೇ ಎಂ.ಎಂ. ಕಲಬುರ್ಗಿ, ಸಿ.ಕೆ. ಪರಶುರಾಮಯ್ಯ ಎಫ್.ಟಿ. ಹಳ್ಳಿಕೇರಿ ಅವರು ಸಂಪಾದಿಸಿದ ತಗರ ಪವಾಡ ಇವುಗಳ ಮುಖಾಂತರ ಹಾಲುಮತ ಸಮುದಾಯದ ಭಂಡಾರ ಸಂಸ್ಕೃತಿಯ ಉಲ್ಲೇಖಗಳನ್ನು ಕಾಣಬಹುದಾಗಿದೆ. ಪ್ರಸ್ತುತ ಬೀರಪ್ಪ, ಮಾಳಿಂಗರಾಯ, ಮೈಲಾರಲಿಂಗ, ಚಿಂಚಲಿ ಮಾಯವ್ವ, ಗಂಗೆಮಾಳವ್ವ, ಬಂಡಾರ ದೈವಗಳಾಗಿದ್ದು ಪುರಾಣಗಳಲ್ಲಿ ಈ ದೈವಗಳ ಭಂಡಾರ ಸಂಸ್ಕೃತಿಯ ಬಗ್ಗೆ ಉಲ್ಲೇಖಿಸಲಾಗಿದೆ.

**ಜನಪದ ಹಾಲುಮತ ಮಹಾಕಾವ್ಯ :**

ಜನಪದರು ಹಾಲುಮತದ ಚರಿತ್ರೆಯನ್ನು ಕಟ್ಟಿಕೊಂಡ ಒಂದು ವಿಶಿಷ್ಟವಾದ ಪರಿಯಾಗಿದೆ. ಹಾಲುಮತ ಹುಟ್ಟು ದೈವಗಳ ಜೊತೆಗೆ ಅವರ ಬದುಕಿನ ಭಂಡಾರ ಸಂಸ್ಕೃತಿಯನ್ನು ಈ ಮಹಾಕಾವ್ಯದಲ್ಲಿ ವಿಶೇಷವಾಗಿ ಕಾಣಬಹುದಾಗಿದೆ.

"ಊಟಕ ಹುಲಿಗಿಣ್ಣ ಬೇಡ್ಯಾನ ಆಟಕ ಹುಲಿಮರಿಯೇನ
ಆಟಕ ಹುಲಿಮರಿಯೇನೆ ಲಿಂಗ ಬೀರಣ್ಣ ದೇವರಿಗೆ"[೨೬]

ಗುರು ಬೀರಣ್ಣನು ಗದ್ದುಗೆ ಏರಿದ ನಂತರ ಆತನಿಗೆ ಊಟಕ್ಕೆ ಹುಲಿಗಿಣ್ಣವನ್ನು ಆಟಕ್ಕೆ ಹುಲಿಮರಿಯನ್ನು ಒಪ್ಪಿಸಲು ಮಾಳನನ್ನು ಕೇಳುತ್ತಾನೆ. ಮಾಳಪ್ಪ ಗುಡ್ಡದ ಕೆಳಗಿನ ಗುಡ್ಡ ನದಿ ಅಲ್ಲೊಂದು ಗವಿಯಲ್ಲಿಗೆ ಬರುತ್ತಾ ಹುಲಿ ಮರಿಗಳ ಕಣ್ಣು ತೆರೆಯುವ ಮುನ್ನವೆ ತಾಯಿ ಹುಲಿಯು ಮೇಯಲು ಹೋಗಿತ್ತು. ಅಷ್ಟರಲ್ಲಿ ಅಲ್ಲಿಗೆ ಒಂದು ಸರ್ಪ ಬಂದಿತು. ಮಾಳಪ್ಪ ಅದರ

ಮೇಲೆ ಭಂಡಾರ ಒಗೆಯಲು ಸರ್ಪ ಹಿಂದಕ್ಕೆ ಹೋಯಿತು. ಹುಲಿಗಳ ಮರಿ ಮೇಲೆ ಭಂಡಾರ ಒಗೆದಾಗ ಅವುಗಳ ಕಣ್ಣುಗಳು ಬಂದವು. ಈ ರೀತಿಯಾಗಿ ಭಂಡಾರದ ಪವಾಡ ಮೂಲಕ ಹುಲಿಹಾಲು ಮತ್ತು ಹುಲಿಮರಿಯನ್ನು ಬೀರಪ್ಪನಿಗೆ ಮಾಳಪ್ಪ ನೀಡುತ್ತಾನೆ.

ಚಿಂಚಲಿ ಮಾಯವ್ವನ ಜನಪದ ಹಾಲುಮತ ಮಹಾಕಾವ್ಯದಲ್ಲಿ ಭಂಡಾರ ಸಂಸ್ಕೃತಿಯನ್ನು ವ್ಯಕ್ತವಾಗಿದೆ.

"ಹೆಜ್ಜೆ, ಕಾಣುತಾವೇನ ಹೆಜ್ಜೆಗುರುತ ಹಿಡಿದಾರೆ
ಒಂದಾ ಹೆಜ್ಜೆ ಭಂಡಾರದೇ ಇನ್ನೊಂದು ಹೆಜ್ಜೆ ಕುಂಕುಮದೆ"[೨೭]

ಚಿಂಚಲಿ ಮಾಯಮ್ಮ ಕರ್ನಾಟಕ ಮತ್ತು ಮಹಾರಾಷ್ಟ್ರದ ಭಕ್ತರ ಹಾಲುಮತ ಸಮುದಾಯದ ಭಂಡಾರ ಸಂಸ್ಕೃತಿಯ ಪ್ರತೀಕವಾಗಿದ್ದಾಳೆ. ಮಾಯವ್ವ ಏಳು ಹಿಂಡು ಕುರಿಗಳನ್ನು ಕಾಯುತ್ತ ಬಾಗೇವಾಡಿಗೆ ಬರುತ್ತಾಳೆ. ಮಾಯವ್ವನ ಅಕ್ಕಂದಿರು ಮಾಯವ್ವನನ್ನು ಭಂಡಾರ ಮತ್ತು ಕುಂಕುಮದ ಹೆಜ್ಜೆ ಗುರುತು ಹಿಡಿದು ಆರು ಜನ ಅಕ್ಕಂದಿರು ಬಾಗೆನಾಡಿಗೆ ಬರುತ್ತಾರೆ. ಈ ರೀತಿಯಾಗಿ ಭಂಡಾರದ ಉಲ್ಲೇಖವನ್ನು ಸ್ತ್ರೀದೇವತೆಯಲ್ಲಿ ವ್ಯಕ್ತವಾಗಿರುವುದನ್ನು ಸಿದ್ದಣ್ಣ ಎಫ್. ಜಕಬಾಳರವರು 'ಚಿಂಚಲಿ' ಎಂಬ ಕೃತಿಯಲ್ಲಿ ಉಲ್ಲೇಖಿಸಿದ್ದಾರೆ. ಇದನ್ನು ಎಫ್.ಟಿ. ಹಳ್ಳಿಕೇರಿಯವರು (ಸಂ) ಕೃತಿಯಲ್ಲಿ ವ್ಯಕ್ತಪಡಿಸಿದ್ದಾರೆ.

**ಗಂಗಿ ಮಾಳವ್ವನ ವೃತ್ತಾಂತ :**

ಗಂಗಿ ಮಾಳವ್ವನ ವೃತ್ತಾಂತದಲ್ಲಿ ಭಂಡಾರ ಉಲ್ಲೇಖ ನೋಡುವುದಾದರೆ ಗಂಗಿಮಾಳವ್ವ ಮಲ್ಲಯ್ಯನನ್ನು(ಶಿವನನ್ನು) ಕುರಿತು ನೀವು ಭೂಲೋಕಕ್ಕೆ ಯಾವುದಕ್ಕೆ ಬಂದಿರಿ ಎಂದು ಕೇಳಿದಾಗ ಮಲ್ಲಾಸುರನ ವಧೆ ಮಾಡಲು ಎಂದು ಮಲ್ಲಯ್ಯ ಹೇಳುತ್ತಾನೆ.

"ಬಾರೋ ಬಾರೋ ಏಸ್ವಾಮಿ ಯಾಕ ಬಂದೀದಂದಾಳ
ಕೈಲಾಸದಲಿಂದೇನೆ ಏನುಕಾರಣ ಬಂದಿದೆ
ಮಣಿಯೂ ಮಲ್ಲಾಸೂರಗ ಸಂವಾದ ಮಾಡಲಿ ಬಂದೇನ
ಮಣಿ ಮಲ್ಲಾಸೂರಿಗೆ ಕೋಲಿಯಾ ಮಾಡಲಿ ಬಂದೇನ
ಬರುವುದಕೆಲ್ಲ ಬಂದಿನೇ ಭಂಡಾರ ಮರತ ಬಂದೀನೆ
ನಿನ್ನ ಹಂತಿಲಲ್ಲವ್ವ ಭಂಡಾರಾದಂತೇಳ್ಯಾರ
ಭಂಡಾರಾದಂತೇಳ್ಯಾರೆ ನಿನ್ನ ಸಲುವಾಗಿ ಬಂದೇನ
ನನ್ನ ಬಲ್ಲಿ ಮರಾಯ ಭಂಡಾರಾದಂತೇಳ್ಯಾರ

ನನ್ನ ಲಗ್ನನಾಗಿಲ್ಲ ಲಗ್ಗನಾಗಲಿ ಬೇಕಯಾ
ಭಂಡಾರ ಕೈವಾಸ ಕೊಟ್ಟೇನೆ ಬೆನ್ನಿಂದ ಬರತೀನಿ ಅರಿದಾಳ"[೨೮]

ಮಲ್ಲಯ್ಯನನ್ನು ಗಂಗಿ ಮಾಳವ್ವ ನೀವು ಏತಕ್ಕೆ ಬಂದೀರಿ ಎಂದು ಕೇಳಲಾಗಿ ಮಣಿಯಮಲ್ಲಾಸುರನಿಗೆ ವದೆ ಮಾಡಲು ಎಂದು ಮಲ್ಲಯ್ಯ ಹೇಳಿದನು. ಆದರೆ ಭಂಡಾರವನ್ನು ಮರೆತು ಬಂದಿರುವುದಾಗಿ ಭಂಡಾರ ಕೊಡುತ್ತೇನೆ. ನಿನ್ನ ಜೊತೆಗೆ ಬರುತ್ತೇನೆ ಎಂದಳು ಮಾಳವ್ವ ತನ್ನ ಉಡಿಯಲ್ಲಿ ಭಂಡಾರ ಕಟ್ಟಿಕೊಂಡು ಮಲ್ಲಯ್ಯನ ಬೆನ್ನು ಹತ್ತಿದಳು. ಹೀಗೆ ಜನಪದ ಹಾಲುಮತ ಕಾವ್ಯದಲ್ಲಿ ಭಂಡಾರದ ಉಲ್ಲೇಖವಾಗಿರುವುದನ್ನು ಕಾಣಬಹುದಾಗಿದೆ.

**ಮೈಲಾರಲಿಂಗ ಕಾವ್ಯ :**

ಮೈಲಾರಲಿಂಗನ ಕಾವ್ಯದಲ್ಲಿ ಮೈಲಾರನ ಸ್ವರೂಪವನ್ನು ವರ್ಣಿಸುವಾಗ ಭಂಡಾರದ ಉಲ್ಲೇಖ ನೋಡಬಹುದಾಗಿದೆ.

ವಿಭೂತಿ ರುದ್ರಾಕ್ಷಿಯೋಳು ಹುಟ್ಟಿದು
ಈ ಶಿವಲಿಂಗ ॥ಮು॥
ನಮಃಶಿವ ॥ಹಿ॥
ಆರು ಖಂಡುಗ ಭಂಡಾರವನ್ನ
ಅಡ್ಡ ಬಡ್ಡವನ್ನಧರಿಸಿ ॥ಮು॥
ನಮಃ ಶಿವ ॥ಹಿ॥
ಮೂರು ಖಂಡುಗ ಭಂಡಾರವನ್ನ
ಚುಕ್ಕೆ ಬಟ್ಟವನ್ನಿಟು ॥ಮು॥
ನಮಃ ಶಿವಾಯ ॥ಹಿ॥[೨೯]

"ಕರಿಕಂಬಳಿ, ಕರಿ ಟೊಪ್ಪಿಗೆಧರಿಸಿ, ಕೈಯಲ್ಲಿ ಡಮರುಗ ಹಿಡಿದು ಭಂಡಾರ ಹಚ್ಚಿರುತ್ತಾನೆ. ವೀರಭದ್ರನನ್ನು ಸುಲಿದು ಮಜ್ಜಿಗೇರಿಯಲ್ಲಿ ಮಲೆಹೆಬ್ಬುಲಿಯಂತೆ ಹಾಲುಮತದ ಕುಲದ ಜಂಜುಲಿಂಗೇಶ್ವರನೆನಿಸಿಕೊಳ್ಳುತ್ತಾನೆ. ಕಪ್ಪಲ ಮುನೀಶ್ವರ, ಅಡ್ಡಗುಡ್ಡದ ಮಲ್ಲ, ಮಹೋಗುಡ್ಡರ ಮಲ್ಲಿ ಎಂದು ನೂರೆಂಟು ಹೆಸರುಂಟು. ಹಾಲಿನ ಬಟ್ಟೆಯ ಮೇಲೆ ಆಡುತ್ತಾ ತುಪ್ಪದ ಬಟ್ಟೆಯ ಮೇಲೆ ಹಾಡುತ್ತಾ ಮುಸುತಿನ ಬಟ್ಟೆಯ ಮೇಲೆ ಮೆರೆಯುತ್ತಾ ಬರುತ್ತಾನೆ. ಆಕಾಶಕ್ಕೆ ಒಂದು ಕಾಲು, ಭೂಮಿಗೆ ಒಂದು ಕಾಲು ನೆಲವಿಲ್ಲದಂತೆ. ನಾಟ್ಯಮಾಡಿ ಮೀನಗುಂದಿ ಮಲ್ಲನೆನಿಸಿ ಕೊಳ್ಳುತ್ತಾನೆ. ಬಲಿಗೆ ಒಡೆದು ವೀರಭದ್ರನನ್ನು ಜಲಗ್ಗಿ ವಿಭೂತಿ ರುದ್ರಾಕ್ಷಿಯಲ್ಲಿ ಶಿವಲಿಂಗ

ಹುಟ್ಟುತ್ತದೆ. ಆ ಲಿಂಗ ಆರು ಖಂಡುಗ ಭಂಡಾರವನ್ನು ಅಡ್ಡಧರಿಸಿ ಮೂರು ಖಂಡುಗ ಭಂಡಾರವನ್ನು ಚುಕ್ಕೆ ಇಟ್ಟು, ಮಾಯದ ಕುದುರೆಯೇರಿ ಸಪ್ತ ನದಿಗಳನ್ನು ದಾಟಿ ಮಣಿಮಲ್ಲಪುರವೆಂಬ ಪುರದಲ್ಲಿ ಮಣಿಮಲ್ಲಿ ನೆನೆಸಿಕೊಂಡಿದ್ದಾನೆ"[೩೦] ಈ ರೀತಿಯಾಗಿ ಮಲ್ಲಯ್ಯನನ್ನು ವರ್ಣಿಸುವಲ್ಲಿ ಭಂಡಾರ ಉಲ್ಲೇಖವನ್ನು ಮೈಲಾರಲಿಂಗ ಕಾವ್ಯದಲ್ಲಿ ವ್ಯಕ್ತವಾಗಿದೆ.

**ತಗರ ಪವಾಡ :**

ತಗರ ಪವಾಡ ಕಾವ್ಯದಲ್ಲಿ ಬರುವ ಉಲ್ಲೇಖವನ್ನು ನೋಡುವುದಾದರೆ "ಅಮೋಘ ಸಿದ್ದನ ವರವಿನ ಮಗನಾದ ಬಾಲಕ ಬಿಳಿಯಾನಿಸಿದ್ದ. ಈ ಪವಾಡವನ್ನು ಮೆರೆಯುತ್ತಾನೆ. ಕಲ್ಯಾಣದಲ್ಲಿದ್ದ ಕುಂಬಾರ ರಾಮಯ್ಯನೆಂಬುವವನ ಮಗನಿಗೆ ಲಿಂಗದೀಕ್ಷೆ ನೀಡಲು ಆತ ಹೊರಡುತ್ತಾನೆ. ಹೊರಡುವಾಗ ಏಳು ಗಜ ಉದ್ದದ ಬಂಡೆಗಲ್ಲಿಗೆ ಭಂಡಾರ ಹೊಡೆದು ಅದನ್ನು ಆನೆಯನ್ನಾಗಿಸಿ ಅದರ ಮೇಲೆ ಕುಳಿತು ಹೊರಟ ರೀತಿ ದಿಗ್ವಿಜಯಕ್ಕೆ ಹೊರಟ ಯುವರಾಜನನ್ನು ನೆನಪಿಸುವಂತಿದೆ. ದಾರಿಮಧ್ಯದಲ್ಲಿ ಕುರಿಗಾರ ಕರೆಪ್ಪನೆಂಬುವವನು ತನ್ನನ್ನು ಕಲ್ಯಾಣದಿಂದ ಹೊರಗಿಟ್ಟು ಕತೆಯನ್ನು ಹೇಳುತ್ತಾನೆ. ಆಗ ಭಂಡಾರ ಹೊಡೆದು ಸತ್ತ ಕುರಿಯನ್ನು ಬದುಕಿಸುವ ಪವಾಡ ಮಾಡುವ ಮೂಲಕ ಕುರುಬರಿಗೆ ಕಲ್ಯಾಣದಲ್ಲಿ ಪ್ರವೇಶ ದೊರಕಿಸಿ ಕೊಡುತ್ತಾನೆ"[೩೧] ಎಂದು ಚನ್ನಪ್ಪ ಕಟ್ಟಿಯವರು 'ಅರಿಕೇರಿ' ಕೃತಿಯಲ್ಲಿ ಉಲ್ಲೇಖಿಸಿದ್ದಾರೆ.

ಇನ್ನು ಶಂಕರ ದಾಸಿಮಯ್ಯ ಪುರಾಣದಲ್ಲಿ ನೋಡುವುದಾದರೆ "ಗೊರವರು ಕುಂಕುಮ-ಗಂಧಗಳನ್ನು ಹಚ್ಚಿಕೊಂಡಿದ್ದರೆಂದೂ ಕೊರಳಲ್ಲಿ ಬಚ್ಚರಗವಡೆ ಕಂಬಳಿ ಕುಪ್ಪಸ, ನವಿಲುಗರಿ ಚಾಮರ ಕೊಡೆ ಉಡಿಯಲ್ಲಿ ಲಿಂಗ ಬೋಳುದೆಲೆ, ಅರಿಶಿನದ ಪಾತ್ರೆ ಕಿವಿಯಲ್ಲಿ ಪೊಗು ಕಂಬಳಿ ಟೊಪ್ಪಿಗೆ ಹಿತ್ತಾಳೆಯ ಸರ ಧರಿಸಿದ್ದರೆಂದೂ"[೩೨] ಶಂಕರದಾಸಿಮಯ್ಯನ ಪುರಾಣದಲ್ಲಿ ಭಂಡಾರದ ಉಲ್ಲೇಖ ಕಾಣಬಹುದಾಗಿದೆ. ಎಂ.ಎಂ.ಕಲಬುರ್ಗಿಯವರು ಮಾರ್ಗ-೨ರಲ್ಲಿ ಉಲ್ಲೇಖಿಸಿದ್ದಾರೆ.

ಭಂಡಾರದ ಉಲ್ಲೇಖಗಳಲ್ಲಿ ಮಹಾಕಾವ್ಯಗಳಲ್ಲಿ ಒಂದು ಬಹುಮುಖ್ಯ ಪಾತ್ರವಹಿಸುತ್ತವೆ. ಜನಪದ ಹಾಲುಮತ ಕಾವ್ಯ ಮತ್ತು ಮೈಲಾರಲಿಂಗನ ಕಾವ್ಯವು ಒಂದು ಬೃಹತ್ ಜನಪದ ಕಾವ್ಯವಾಗಿದೆ. ಆದರೆ ತಗರ ಪವಾಡಗಳು ಲಿಖಿತ ಪರಂಪರೆಯಿಂದ ಹುಟ್ಟಿ ಮೌಖಿಕ ಪರಂಪರೆಯಲ್ಲಿ ಪ್ರಸರಣಗೊಂಡ ಕಾವ್ಯವಾಗಿದೆ. ಈ ಮೂರು ಕೃತಿಗಳು ಹಾಲುಮತದ ಭಂಡಾರ ಸಂಸ್ಕೃತಿಯ ವ್ಯಾಮೋಹವನ್ನು ತೆರೆದಿಡುವಲ್ಲಿ ಮುಖ್ಯವಾದ ಕೃತಿಗಳಾಗಿವೆ.

ಒಟ್ಟಾರೆ, ಭಂಡಾರ ಅರ್ಥ, ವ್ಯಾಖ್ಯೆ ಮತ್ತು ಉಲ್ಲೇಖಗಳಲ್ಲಿ ಭಂಡಾರ ಸಂಸ್ಕೃತಿ ಮಾನವನ ಬದುಕಿನ ಜೊತೆಗೆ ಬೆರೆತಿರುವುದನ್ನು ಕರ್ನಾಟಕದ ಬಹಳಷ್ಟು ಗ್ರಾಮದೇವತೆಗಳ ಸಂಬಂಧದಲ್ಲಿ

ಅರಿಶಿನ ಅಥವಾ ಭಂಡಾರ ಸಂಬಂಧ ಪಡೆದಿರುವುದು ತುಂಬಾ ಗಮನಾರ್ಹವಾದ ಸಂಗತಿಯಾಗಿದೆ. ಅದರಲ್ಲೂ ವಿಶೇಷವಾಗಿ ಹಾಲುಮತ ಸಂಪ್ರದಾಯ ಆಚರಣೆಯಲ್ಲಿ ಭಂಡಾರ ವೈವಿಧ್ಯಮಯವಾದ ಬಳಕೆಯ ವಸ್ತುವಾಗಿದೆ. ಭಂಡಾರ ಪಶುಪಾಲಕರಾದ ಕುರುಬರ ಜಾತಿಗೆ ಸೀಮಿತವಾಗಿದೆ. ಇತರ ಸಮುದಾಯದವರಿಗೂ ಅದು ತನ್ನದೇ ಆದ ಸಾಂಸ್ಕೃತಿಕ ಮಹತ್ವ ಪಡೆದುಕೊಂಡಿದೆ.

## ಕೊನೆ ಟಿಪ್ಪಣಿ

೧. ಕನ್ನಡ ಸಾಹಿತ್ಯ ಪರಿಷತ್ತು, ಕನ್ನಡ-ನಿಘಂಟು ಏಳನೆಯ ಸಂಪುಟ, ಪುಟ.೬೬೮೯, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು,೧೯೯೩

೨. ಮೈಲಾರ ಮತ್ತು ಖಂಡೋಬ ಡಾ.ಎಂ.ಬಿ. ನೇಗಿನಹಾಳ, ಪುಟ-೨೭೦, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

೩. ಶ್ರೀಮೈಲಾರ ಲಿಂಗೇಶ್ವರ ದಿವ್ಯ ಪರಿತಾಮೃತ, ಕೃಷ್ಣಪ್ಪ, ಪುಟ.೨೧೫, ಅಪ್‌ಸೆಟ್ ಪ್ರಿಂಟರ್ಸ್, ದಾವಣಗೆರೆ, ೨೦೦೮

೪. ನೇಗಿನಹಾಳ ಪ್ರಬಂಧಗಳು, ಪುಟ.೧೯೧, ಪ್ರಸಾರಾಂಗ, ಕವಿವಿ, ಹಂಪಿ, ೧೯೯೯

೫. ಮೈಲಾರ ಮತ್ತು ಖಂಡೋಬ, ಡಾ.ಎಂ.ಬಿ. ನೇಗಿನಹಾಳ, ಪುಟ.೨೨೨, ಕವಿವಿ, ಧಾರವಾಡ, ೧೯೯೨

೬. ಅದೇ ಪು.೨೬೯

೭. ನೇಗಿನಹಾಳ ಪ್ರಬಂಧಗಳು, ಪುಟ.೧೯೨, ಪ್ರಸಾರಾಂಗ, ಕವಿವಿ, ಹಂಪಿ, ೧೯೯೯

೮. ಅದೇ ಪು.೧೪೮

೯. ಮೈಲಾರ ಮತ್ತು ಖಂಡೋಬ ಎಂ.ಬಿ.ನೇಗಿನಹಾಳ, ಪುಟ.೨೬೯, ಕವಿವಿ, ಧಾರವಾಡ, ೧೯೯೨

೧೦. ನೇಗಿನಹಾಳ ಪ್ರಬಂಧಗಳು, ಎಂ.ಬಿ. ನೇಗಿನಹಾಳ ಪುಟ-೪೬೬, ಪ್ರಸಾರಾಂಗ, ಕವಿವಿ, ಹಂಪಿ, ೧೯೯೯

೧೧. ನೇಗಿನಹಾಳ ಪ್ರಬಂಧಗಳು, ಎಂ.ಬಿ. ನೇಗಿನಹಾಳ ೪೬೭, ಪ್ರಸಾರಾಂಗ, ಕವಿವಿ, ಹಂಪಿ, ೧೯೯೯

೧೨. ನೇಗಿನಹಾಳ ಪ್ರಬಂಧಗಳು, ಎಂ.ಬಿ. ನೇಗಿನಹಾಳ ೪೬೫, ಪ್ರಸಾರಾಂಗ, ಕವಿವಿ, ಹಂಪಿ, ೧೯೯೯

೧೩. ಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ, ಕೃಷ್ಣಪ್ಪ, ಪುಟ.೧೮೫, ಪ್ರಕಾಶನ ಆಫ್‌ಸೆಟ್ ಪ್ರಿಂಟರ್ಸ್, ದಾವಣಗೆರೆ, ೨೦೦೮

೧೪. ನೇಗಿನಹಾಳ ಪ್ರಬಂಧಗಳು, ಎಂ.ಬಿ. ನೇಗಿನಹಾಳ, ೧೧೯, ಪ್ರಸಾರಾಂಗ, ಕವಿವಿ, ಹಂಪಿ, ೧೯೯೯

೧೫. ನೇಗಿನಹಾಳ ಪ್ರಬಂಧಗಳು, ಎಂ.ಬಿ. ನೇಗಿನಹಾಳ, ಪುಟ.೧೦೮, ಪ್ರಸಾರಾಂಗ, ಕವಿವಿ, ಹಂಪಿ, ೧೯೯೨

೧೬. ಮೈಲಾರ ಮತ್ತು ಖಂಡೋಬ, ಡಾ.ಎಂ.ಬಿ.ನೇಗಿನಹಾಳ, ಪುಟ.೬೮, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨

೧೭. ನೇಗಿನಹಾಳ ಪ್ರಬಂಧಗಳು, ಎಂ.ಬಿ. ನೇಗಿನಹಾಳ, ಪುಟ.೧೧೨, ಪ್ರಸಾರಾಂಗ, ಕವಿವಿ, ಹಂಪಿ, ೧೯೯೨
೧೮. ಮೈಲಾರ ಮತ್ತು ಖಂಡೋಬ, ಡಾ.ಎಂ.ಬಿ.ನೇಗಿನಹಾಳ, ಪುಟ.೮೭, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೯೨
೧೯. ಅದೇ, ಪು.೩೬
೨೦. ಅದೇ, ಪು.೨೬೧
೨೧. ಅದೇ, ಪು.೨೬೭
೨೨. ಅದೇ, ಪು.೧೬೨
೨೩. ಹಾಲುಮತ ಸಾಂಸ್ಕೃತಿಕ ಪದಕೋಶ, ಲಿಂಗದಹಳ್ಳಿ ಹಾಲಪ್ಪ, ಪುಟ-೨೫೧ ಹಾಲುಮತ ಸಂಸ್ಕೃತಿ ಪ್ರತಿಷ್ಠಾನ, ಹೊಸಪೇಟೆ, ೨೦೧೪
೨೪. ಹಾಲುಮತ ವ್ಯಾಸಂಗ-೧, ಎಫ್.ಟಿ.ಹಳ್ಳಿಕೇರಿ, ಪುಟ.೫೧, ಪ್ರಸಾರಾಂಗ, ಕವಿವಿ. ಹಂಪಿ, ೨೦೦೯
೨೫. ಹಾಲುಮತ ವ್ಯಾಸಂಗ-೧, ಎಫ್.ಟಿ.ಹಳ್ಳಿಕೇರಿ, ಪುಟ.೫೬, ಪ್ರಸಾರಾಂಗ, ಕವಿವಿ. ಹಂಪಿ, ೨೦೦೯
೨೬. ಜನಪದ ಹಾಲುಮತ ಮಹಾಕಾವ್ಯ, (ಸಂ) ವೀರಣ್ಣ ದಂಡೆ, ಪುಟ.೧೬೩, ಸಾಗರ ಪ್ರಕಾಶನ, ಬೆಂಗಳೂರು, ೨೦೧೩
೨೭. ಅದೇ, ಪು.೨೬೫
೨೮. ಅದೇ, ಪು. ೭೦೮
೨೯. ಮೈಲಾರಲಿಂಗನ ಕಾವ್ಯ, ಮಂಜುನಾಥ ಬೇವಿನಕಟ್ಟಿ, ಪುಟ.೨೭, ಪ್ರಸಾರಾಂಗ, ಕವಿವಿ. ಹಂಪಿ, ೧೯೯೯
೩೦. ಅದೇ, ಪುಟ.೮
೩೧. ಹಾಲುಮತ ವ್ಯಾಸಂಗ-೨, ಎಫ್.ಟಿ.ಹಳ್ಳಿಕೇರಿ, ಪುಟ.೪೫, ಪ್ರಸಾರಾಂಗ, ಕವಿವಿ. ಹಂಪಿ, ೨೦೧೧
೩೨. ಮಾರ್ಗ ಸಂಪುಟ-೨, ಎಂ.ಎಂ.ಕಲಬುರ್ಗಿ, ಪುಟ-೩೦೬, ಸಪ್ನಬುಕ್‌ಹೌಸ್, ಬೆಂಗಳೂರು, ೨೦೧೦

# ಅಧ್ಯಾಯ – ಮೂರು

## ಭಂಡಾರ : ಸಂಪ್ರದಾಯ–ಆಚರಣೆ–ನಂಬಿಕೆಗಳು

ಸಂಪ್ರದಾಯ–ಆಚರಣೆ–ನಂಬಿಕೆಗಳು ಜನಪದರ ಬದುಕಿನ ಅವಿಭಾಜ್ಯ ಅಂಗಗಳು. ಅವು ಕಾಲಮಾನಕ್ಕೆ ತಕ್ಕಂತೆ ಬದಲಾವಣೆಗೊಳ್ಳುತ್ತ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು ನಿರಂತರವಾಗಿ ಸಾಗಿಬಂದಿದೆ. ಮನುಷ್ಯ ತಾನು ನಡೆಸಿಕೊಂಡು ಬಂದ ವಿಶಿಷ್ಟ ಆಚರಣೆಗಳ ಬಗ್ಗೆ ಹೊಂದಿದ ಶ್ರದ್ಧೆ, ಉತ್ಸಾಹಗಳು, ನಂಬಿಕೆ, ಸಂಪ್ರದಾಯದ ಸೃಷ್ಟಿಗೆ ಕಾರಣವಾಗಿವೆ. ಸಂಪ್ರದಾಯ, ಆಚರಣೆಗಳು ತಲೆಮಾರಿನಿಂದ ತಲೆಮಾರಿಗೆ ವಂಶವಾಹಿನಿಯಂತೆ ಸಾಗಿಬಂದಿವೆ. ಆಚರಣೆ ಎಂಬ ಪದ ಇಂಗ್ಲೀಷಿನ Ritual ಎಂಬ ಪದಕ್ಕೆ ಸಂವಾದಿಯಾದುದು. Ritu ಎಂಬ ಲ್ಯಾಟಿನ್ ಮೂಲದ ಪದ. ಇದರ ಅರ್ಥ ಸಂಪ್ರದಾಯ ಎಂದಿದೆ. ಜನಪದ ಆಲೋಚನೆಯಿಂದ ಹೊರಹೊಮ್ಮಿದ ಆಚರಣೆಯ ವ್ಯವಸ್ಥೆಗಳು ಮಾನವ ಮತ್ತು ಪ್ರಕೃತಿಯ ನಡುವಿನ ಸಂಬಂಧ ಗಟ್ಟಿಗೊಳಿಸಿವೆ. ಅಲ್ಲದೇ ನಿಸರ್ಗದ ಮೇಲಿನ ಸಂಪೂರ್ಣ ನಿಯಂತ್ರಣದ ಭ್ರಮೆಯನ್ನು ಮಾನವನಲ್ಲಿ ಉಂಟುಮಾಡುತ್ತಿವೆ. ಈ ಹಿನ್ನೆಲೆಯಲ್ಲಿ ವಿಭಿನ್ನ ರೀತಿಯ ಕ್ರಿಯಾಚರಣೆಗಳು ರೂಪಗೊಂಡಿವೆ. ಅವು ಒಮ್ಮೊಮ್ಮೆ ಸಾಮಾಜಿಕ, ಧಾರ್ಮಿಕ, ಪೌರಾಣಿಕ, ಚಾರಿತ್ರಿಕ, ವೈಜ್ಞಾನಿಕ ಘಟನೆಗಳಿಂದ ಪ್ರಭಾವಿತವಾಗಿರುವುದುಂಟು. ಅದೇ ರೀತಿ 'ಹಾಲುಮತ ಸಮಾಜ' ಕರ್ನಾಟಕದ ಇತರೆ ಸಮಾಜದಂತೆ ತನ್ನದೇ ಆದ ಆಚರಣೆ–ಸಂಪ್ರದಾಯ–ನಂಬಿಕೆಗಳನ್ನು ಭಂಡಾರ ಸಂಸ್ಕೃತಿಯಲ್ಲಿ ಅಳವಡಿಸಿಕೊಂಡಿದೆ. ಪ್ರಸ್ತುತ ಬದಲಾಗುತ್ತಿರುವ ಸಮಾಜದಲ್ಲಿ ಭಂಡಾರ ಸಂಪ್ರದಾಯ ಆಚರಣೆ–ನಂಬಿಕೆಗಳನ್ನು ಉಳಿಸಿಕೊಂಡು ಮತ್ತು ಬೆಳೆಸಿಕೊಂಡು ಬರುವಲ್ಲಿ ಮಹತ್ವಪೂರ್ಣವಾಗಿದೆ. ಈ ಅಧ್ಯಯನದಲ್ಲಿ ಮೊದಲು ಸಂಪ್ರದಾಯ ಮತ್ತು ಆಚರಣೆಗಳು ಈ ಎರಡನ್ನು ಜೊತೆ ಜೊತೆಯಾಗಿ ವಿವರಿಸಲಾಗಿದೆ. ನಂಬಿಕೆಯನ್ನು ಪ್ರತ್ಯೇಕವಾಗಿ ಚರ್ಚಿಸಲಾಗಿದೆ.

## I. ಸಂಪ್ರದಾಯ–ಆಚರಣೆ :

ಧಾರ್ಮಿಕ ಪಾವಿತ್ರ್ಯದ ಜೊತೆಗೆ ಅತಿಮಾನುಷ ಶಕ್ತಿಗಳ ಭಯವೂ ಮಿಗಿಲಾದುದೇ ಆದುದರಿಂದ ಆಚರಣೆಗಳನ್ನು ಅತ್ಯಂತ ಶ್ರದ್ಧೆಯಿಂದ ನಡೆಸಲಾಗುತ್ತದೆ. ನುಡಿಯಲ್ಲಿ ನಡೆಯಲ್ಲಿ ಸಣ್ಣ ತಪ್ಪಾದರೂ ಅನರ್ಥವಾದೀತೆಂಬ ಅಂಜಿಕೆ ಪ್ರತಿಯೊಂದು ಆಚರಣೆಗಳ ಹಿನ್ನೆಲೆಯಲ್ಲಿ ಇದ್ದೇ ಇರುತ್ತದೆ. ಕ್ರಮವತ್ತಾದ ವಿಧಿಪೂರ್ವಕವಾದ, ಪರಂಪರಾನುಗತವಾಗಿ ನಡೆದುಬಂದ ರೀತಿಯಲ್ಲಿ ನಡೆಸುವ ಇಂಥ ಕ್ರಿಯೆಗಳ ಹಿನ್ನೆಲೆಯಲ್ಲಿ ನಂಬಿಕೆ ಆಳವಾಗಿ ಬೇರು ಬಿಟ್ಟಿರುತ್ತದೆ. ಧರ್ಮ ಅದರ ಅಡಿಗಲ್ಲು ಆಗಿದೆ. ಧಾರ್ಮಿಕ ವಿಧಿಗಳಿಂದ ತಾನು ನಂಬಿದ ಪವಿತ್ರ ವಸ್ತುಗಳ ಪ್ರೀತಿಯನ್ನು ಸಂಪಾದಿಸಬಹುದೆಂದು ಮನುಷ್ಯ ವರ್ಣಿಸುತ್ತಾನೆ. ಇದು ಕ್ರಮವತ್ತಾದ ಅರ್ಚನಾಕ್ರಮವೂ ಹೌದು. ಲೌಕಿಕ ಹಿನ್ನೆಲೆಗಳಲ್ಲಿ ಸಂಪ್ರದಾಯ ಸ್ಪಷ್ಟ ರೀತಿಯಲ್ಲಿ ನಡೆಸುವ ಒಂದು ಕ್ರಿಯೆಯೂ ಹೌದು.

ಆಂಧ್ರ, ಕರ್ನಾಟಕ, ಮಹಾರಾಷ್ಟ್ರ ಮುಂತಾದ ರಾಜ್ಯಗಳಲ್ಲಿ ವ್ಯಾಪಕವಾಗಿ ಭಂಡಾರ ಸಂಪ್ರದಾಯ ಹರಡಿಕೊಂಡಿರುವುದಲ್ಲದೇ ತನ್ನದೇ ಆದ ಒಂದು ಸಾಂಸ್ಕೃತಿಕ ಚೌಕಟ್ಟು ಹೊಂದಿದೆ. 'ಮೈಲಾರಲಿಂಗನ ಜಾತ್ರೆ, ಒಂದು ಬೃಹತ್ ಸಂಪ್ರದಾಯವಾಗಿ ಭಂಡಾರ ಸಂಪ್ರದಾಯದ ಆಚರಣೆಯನ್ನು ಆಚರಿಸುವುದು ಒಂದು ಮಹತ್ವದ ಕೊಡುಗೆಯಾಗಿದೆ. ಪ್ರಸ್ತುತ ಭಂಡಾರ ಸಂಪ್ರದಾಯ ಆಚರಣೆಯನ್ನು ಹಾಲುಮತಸ್ಥರ ದೈವಗಳಾದ ಮೈಲಾರಲಿಂಗ, ಬೀರಪ್ಪ, ಮಾಳಿಂಗರಾಯ, ಖಂಡೋಬಾ ಮತ್ತು ಒಡೆಯರಲ್ಲಿ ಅಮೋಘಸಿದ್ಧ ಹಾಗೂ ಹೆಣ್ಣು ದೇವರಲ್ಲಿ ಹುಲಿಗೆಮ್ಮ, ಎಲ್ಲಮ್ಮ, ದುಗ್ಗಮ್ಮ, ಮಾಯಮ್ಮ ಮುಂತಾದ ಕುರುಬರ ಆರಾಧ್ಯ ದೈವಗಳಲ್ಲಿ ಭಂಡಾರ ಸಂಸ್ಕೃತಿ ಕಾಣಬಹುದಾಗಿದೆ. ಹಾಗೂ ಈ ಎಲ್ಲಾ ದೇವರುಗಳ ಜಾತ್ರೆ–ಉತ್ಸವಗಳ ಭಂಡಾರ ಸಂಪ್ರದಾಯ ಆಚರಣೆಗಳಲ್ಲಿ ಮಹತ್ವಪೂರ್ಣವಾಗಿವೆ. ಅಲ್ಲದೇ ಶುಭಕಾರ್ಯದಲ್ಲಿ ಭಂಡಾರ ಸಂಪ್ರದಾಯ ಕಾಣಬಹುದಾಗಿದೆ.

### ಮೈಲಾರಲಿಂಗ ಸಂಪ್ರದಾಯ :

ಮೈಲಾರಲಿಂಗ ಸಂಪ್ರದಾಯವು ಅತ್ಯಂತ ಸಂಕೀರ್ಣವಾದ ಒಂದು ಧಾರ್ಮಿಕ ಸಂಪ್ರದಾಯ, ಮೈಲಾರಲಿಂಗ ದೇವರಿಗೆ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಮೈಲಾರಲಿಂಗ, ಮಲ್ಲಣ್ಣ–ರಾವುತರಾಯ, ಮಾಲತೇಶ, ಮಲ್ಲೂಖಾನ, ಗುಡ್ಡದಯ್ಯ, ಮಲ್ಲಯ್ಯ, ಮಾರ್ತಾಂಡ, ಭೈರವ, ಮಲ್ಲೇಶ್ವರ, ಮಲ್ಲಿಕಾರ್ಜುನ, ಖಂಡೋಬಾ ಹೀಗೆ ಹಲವು ಹೆಸರುಗಳಿಂದ ಪೂಜಿತನಾದ ಮೈಲಾರಲಿಂಗನೇ ಸಂಪ್ರದಾಯದ ಪ್ರಮುಖ ಪುರುಷದೇವರು. ಮೈಲಾರಲಿಂಗನ ಆರಾಧಕರಾದ ಭಕ್ತವರ್ಗದ ಪ್ರಮುಖ ಗುಂಪು ಗೋರವಯ್ಯಗಳದು. ಹೀಗಾಗಿ ಹಬ್ಬಗಳಂದು ಮೈಲಾರ ಲಿಂಗ

ಮತ್ತು ಆತನ ಪತ್ನಿ ಪುತ್ರರನ್ನೇ ಕೇಂದ್ರವಾಗುಳ್ಳ ಧಾರ್ಮಿಕ ಆಚರಣೆ ಮತ್ತು ಭಂಡಾರ ಷಷ್ಠಿ ಸಂಪ್ರದಾಯಗಳನ್ನು ಗೊರವರು ಒಡೆಯರು ಮತ್ತು ಗಣಾಚಾರಿಗಳ ನೇತೃತ್ವದಲ್ಲಿ ಕೈಗೊಳ್ಳುವರು ಎಂದು ತಿಳಿಯಬಹುದಾಗಿದೆ.

ಕರ್ನಾಟಕ ಒಂದರಲ್ಲೇ ಮೈಲಾರಲಿಂಗನ ಹನ್ನೆರಡು ಉಪಕ್ಷೇತ್ರಗಳಿದ್ದು ಪ್ರತಿಯೊಂದು ಕ್ಷೇತ್ರದಲ್ಲಿಯೂ ಭಂಡಾರ ಷಷ್ಠಿ ಹಬ್ಬಗಳನ್ನು ಸಮೃದ್ಧವಾಗಿ ಆಚರಿಸುತ್ತಾರೆ.

**ಹೀರೆಮೈಲಾರ ಭಂಡಾರ ಸಂಪ್ರದಾಯ :**

"ಹಿರೇ ಮೈಲಾರವು ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನಲ್ಲಿದೆ. ಈ ಕ್ಷೇತ್ರವನ್ನು ತುಂಗಭದ್ರಾನದಿಯು ಉಂಗುರಾಕಾರವಾಗಿ ಸುತ್ತುವರದಿರುವುದರಿಂದ ಅದನ್ನು 'ಉಂಗರಾರ' 'ಉಂಗುರಾಲ' 'ಉಂಗ್ಲಾರ' ಮುಂತಾಗಿ ಕರೆಯುತ್ತಾರೆ. ದೇವರಗುಡ್ಡ ಕ್ಷೇತ್ರವು ಹಿರೇಮೈಲಾರದಿಂದ ಸುಮಾರು ೧೫ ಕಿ.ಮೀ. ಅಂತರದಲ್ಲಿದೆ"[೧]. ಮೈಲಾರ ದೇವರ ವಿಶೇಷ ಪೂಜೆ ಅಮವಾಸ್ಯೆಗೆ ಸಾಮಾನ್ಯವಾಗಿ ಜಾತ್ರೆ ನಡೆಯುತ್ತದೆ. ಶ್ರೀ ಮೈಲಾರಲಿಂಗೇಶ್ವರ ಸ್ವಾಮಿಯ ವಾರ್ಷಿಕ ಕಾರ್ಯಕ್ರಮಗಳಲ್ಲಿ ಜಾತ್ರೆ ಮುಖ್ಯವಾದುದು. ಅದನ್ನು ಬಿಟ್ಟರೆ ಎರಡನೆಯ ಮುಖ್ಯ ಕಾರ್ಯಕ್ರಮವೆಂದರೆ 'ಭಂಡಾರ ಷಷ್ಠಿ' ಈ ಕಾರ್ಯಕ್ರಮವೂ ಜಾತ್ರೆಗೆ ನಾಂದಿ ಇದ್ದಂತೆ ಎಂದು ಹೇಳಲಾಗಿದೆ. ಮೈಲಾರ ದೇವರ ವಿಶೇಷ ಪೂಜೆ ಮತ್ತು ಜಾತ್ರೆ–ಉತ್ಸವಗಳು ಬೇರೆ–ಬೇರೆ ದಿನಗಳಂದು ಬೇರೆ–ಬೇರೆ ಸ್ಥಳಗಳಲ್ಲಿ ಜರುಗುತ್ತವೆ. ಹುಣ್ಣಿಮೆ ಮತ್ತು ಅಮವಾಸ್ಯೆಗೆ ಸಾಮಾನ್ಯವಾಗಿ ಜಾತ್ರೆ ನಡೆಯುತ್ತದೆ. ಈ ಜಾತ್ರೆಗಳಲ್ಲಿ ಕಂಡುಬರುವ ಒಂದು ವಿಶೇಷವೆಂದರೆ ಭಂಡಾರ ಪೂಜೆಯಾಗಿದೆ. ಭಂಡಾರ ಎಂದರೆ ಅರಿಶಿಣಪುಡಿ. ಇದು ಈ ಸಂಪ್ರದಾಯದ ಪ್ರಮುಖ ವೈಶಿಷ್ಟ್ಯಗಳಲ್ಲಿ ಒಂದು ಇದರ ಬಳಕೆ ತುಂಬಾ ವ್ಯಾಪಕವಾಗಿ ನಡೆದುಕೊಂಡು ಬರುತ್ತದೆ. ಮೈಲಾರಲಿಂಗ ದೇವರಿಗೆ ಭಕ್ತರು 'ಖಂಡುಗ' ಭಂಡಾರದೊಡೆಯ ಎಂದು ಕರೆಯುತ್ತಾರೆ. ಭಂಡಾರಕ್ಕೆ ಇವನೇ 'ಆದಿಕರ್ತ'ನೆಂದು ಜನಪದ ಹಾಡುಗಳಲ್ಲಿ ವರ್ಣಿಸಿದ್ದಾರೆ.

"ಶಿವನು ಲಿಂಗರೂಪದಲ್ಲಿ ಭೂಲೋಕದಲ್ಲಿ ಅವತರಿಸಿದಾಗ ಅವನ ಜೊತೆ ಭಂಡಾರವು ಹುಟ್ಟಿತೆಂದೂ ಆದ್ದರಿಂದಲೇ ದೇವತೆಗಳು, ಋಷಿಗಳು ಸೇರಿ ಅವನನ್ನು ಪೂಜಿಸಿದರೆಂದೂ, ಹಲವು ಜನಪದ ಕತೆಗಳು ಹೇಳುತ್ತವೆ"[೨] ಎಂದು ಲಿಂಗದಹಳ್ಳಿ ಹಾಲಪ್ಪನವರು ಹಾಲುಮತ ಸಾಂಸ್ಕೃತಿಕ ಪದಕೋಶದಲ್ಲಿ ತಿಳಿಸಿದ್ದಾರೆ. ಮೈಲಾರಲಿಂಗನ ಭಕ್ತರ ನಂಬಿಕೆಯಲ್ಲಿ ಭೂಲೋಕದಲ್ಲಿ ಮೊದಲು ಹುಟ್ಟಿದ್ದೇ ಭಂಡಾರ ಅದರಿಂದ ದೇವರ ಪೂಜೆಗೂ ತಮ್ಮ ನಿತ್ಯ ನೈಮಿತ್ತಿಕ ಕಾರ್ಯಗಳಿಗೂ ಭಂಡಾರ ಉಪಯೋಗಿಸಬೇಕು ಎಂದು ಅವರು ಭಾವಿಸುತ್ತಾರೆ.

**ಭಂಡಾರ ಷಷ್ಠಿ ಅಥವಾ ಛಟ್ಟಿ ಭಂಡಾರ ಆಚರಣೆ :**

ಛಟ್ಟಿ ಎಂದರೆ ತದ್ಭವರೂಪ ಷಷ್ಠಿಯಾಗಿದೆ. ಛಟ್ಟಿ ಹಬ್ಬ ಮೈಲಾರಲಿಂಗನ ದೇವಾಲಯಗಳ ಸ್ವಂತ ವೈಶಿಷ್ಟ್ಯ. ಛಟ್ಟಿ ಹಬ್ಬವನ್ನು ಮಹಾರಾಷ್ಟ್ರದಲ್ಲಿ ಇದನ್ನು 'ವಾಂಗೀಸೆಟಿ' ಎಂದು ಕರೆಯುತ್ತಾರೆ."[೩] ಎಂ.ಬಿ. ನೇಗಿನಹಾಳ ಅವರು ಉಲ್ಲೇಖಿಸಿದ್ದಾರೆ.

ಭಂಡಾರ ಷಷ್ಟಿಯ ಆಚರಣೆಯನ್ನು ಪೌರಾಣಿಕ ಹಿನ್ನೆಲೆಯಲ್ಲಿ ನೋಡುವುದಾದರೆ "ಶಿವನು ಸಕಲ ದೇವತೆಗಳ ಋಷಿಮುನಿಗಳ ಪ್ರಾರ್ಥನೆಯಂತೆ ಅಸುರ ಮರ್ದನಕ್ಕೆ ಪರಶಿವನು ಮಾರ್ತಂಡ ಭೈರವನ ಅವತಾರ ತಾಳಿದನು. ಮತ್ತು ಮಾನಸಿಕವಾಗಿ ರೌದ್ರಶಕ್ತಿಯ ಅಗತ್ಯವಿತ್ತು. ಅದಕ್ಕಾಗಿ ಶಿವನು ಮಹಾಪರಾಕ್ರಮಶಾಲಿಯಾದ ನಂದಿಯ ಕೊಂಬುಗಳನ್ನು ಮುರಿಯುವ ಸಾಹಸ ಶಕ್ತಿ ಹಾಗೂ ಪರಶಿವನಿಗೆ ಲೇಪಿಸುವ ಅರ್ಹತೆ ವಿಷ್ಣುವಲ್ಲದೇ ಬೇರೆಯಾರಿಗೂ ಇರಲಿಲ್ಲ. ಶಿವನ ಆಜ್ಞೆಯಂತೆ ನಂದಿಯ ಕೊಂಬುಗಳನ್ನು ವಿನಯತೆಯಿಂದ ಮುರಿದು ತೇದು 'ಭಂಡಾರವನ್ನಾಗಿ ಶಿವನಿಗೆ ಲೇಪಿಸಿದಾಗ ಶಿವನಿಗೆ ಕೋಟಿ ಮಾರ್ತಂಡನ ಶಕ್ತಿ ಪ್ರಜ್ವಲಿಸುತ್ತದೆ. ನಂತರ ಭಾರತ ಹುಣ್ಣಿಮೆಯ ದಿನ ಬ್ರಾಹ್ಮೀ ಮುಹೂರ್ತದಲ್ಲಿ ಸ್ವಾಮಿಯವರು ಅಸುರ ಮರ್ದನ ಮಾಡುತ್ತಾನೆ. ನಂತರ ಅಸುರ ಪ್ರಾರ್ಥನೆಯಂತೆ ಸ್ವಾಮಿಯು ಸ್ವಯಂಭೂಲಿಂಗವಾಗಿ ಆವತರಿಸಿದ ಅಂದು ಭಾನುವಾರ ಶತತಾರ ನಕ್ಷತ್ರ ಅಂದೇ ಅವನ ಜೊತೆಗೆ ಭಂಡಾರ ಹುಟ್ಟಿತ್ತು. ಭಂಡಾರದಿಂದ ಲಿಂಗಪೂಜಿತವಾಗಿತ್ತು"[೪] ಎಂಬ ಪೌರಾಣಿಕವಾದ ಹಿನ್ನಲೆಯನ್ನು ಶ್ರೀಮೈಲಾರಲಿಂಗೇಶ್ವರ ದಿವ್ಯ ಚರಿತಾಮೃತ ಎಂಬುದರಲ್ಲಿ ಶ್ರೀಕೃಷ್ಣಪ್ಪನವರು ವಿವರಿಸಿದ್ದಾರೆ.

ಇದರ ಸ್ಮರಣಾರ್ಥಕವಾಗಿ ಭಂಡಾರ ಷಷ್ಟಿ ಹಬ್ಬವನ್ನು ಆಚರಿಸುತ್ತಾರೆ. ಈ ಹಬ್ಬವನ್ನು ಗೋರವರು ಮತ್ತು ಒಡೆಯರು ಕೂಡಿ ನಡೆಸುವ ವಿಶೇಷ ಸೇವೆಯಾಗಿದೆ. ಭಂಡಾರ ಷಷ್ಟಿ ಹಬ್ಬ ಆಚರಣೆಯನ್ನು "ಮಾರ್ಗಶೀರ್ಷ ಮಾಸದ ಛಟ್ಟಿಯಲ್ಲಿ ಮಾಡುವುದು ವಿಶೇಷ. ಈ ಛಟ್ಟಿಯನ್ನು 'ಚಂಪಾಷಷ್ಟಿ' ದಿನವು ಭಕ್ತರಿಗೆ ಬಹಳ ಮುಖ್ಯವಾದ ಸಂದರ್ಭ ಉತ್ತರ ಕರ್ನಾಟಕದಲ್ಲಿ ಮಾರ್ಗಶೀರ್ಷ ಮಾಸದ ಹಿಂದಿನ ಅಮವಾಸ್ಯೆ 'ಛಟ್ಟಿ ಅಮವಾಸ್ಯೆ' ಎಂದೇ ಪ್ರಸಿದ್ಧವಾಗಿದೆ, ಮಹಾರಾಷ್ಟ್ರದಲ್ಲಿ ವಾಂಗೀಸಟಿ ಎಂದರೆ ಬದನೆಕಾಯಿ ಛಟ್ಟಿ ಎಂದು ಹೆಸರಿಸಲಾಗಿದೆ. ಇದಲ್ಲದೆ ನವರಾತ್ರಿ ಸಂದರ್ಭದಲ್ಲಿಯೂ ಈ ಕಾರ್ಯಕ್ರಮಕ್ಕೆ ತುಂಬಾ ಪ್ರಶಸ್ತ. ಛಟ್ಟಿಮಾತ್ರ ಯಾವ ವಾರ ಬಂದಿದ್ದರೂ ಸರಿ ಅಂದು ಇದನ್ನು ಇಟ್ಟುಕೊಳ್ಳುತ್ತಾರೆಂದು"[೫] ನೇಗಿನಹಾಳರವರು ತಿಳಿಸಿದ್ದಾರೆ.

ಭಂಡಾರ ಷಷ್ಠಿ ಹಿರೇ ಮೈಲಾರ ದೇವರಗುಡ್ಡದಲ್ಲಿ ಆಚರಣೆ ಮಾಡುವುದಲ್ಲದೇ ಕಾರಿಮನಿಕ್ಷೇತ್ರದ ಮಲ್ಲಯ್ಯನಿಗೆ ಶೀಗೆ ಹುಣ್ಣಿಮೆಯಲ್ಲಿ, ಯಾತಗಿರಿ ಮಲ್ಲಯ್ಯನಿಗೆ ಭಂಡಾರ ಪೂಜೆಯನ್ನು

ಮಾಗಶಿರ್ಷದಲ್ಲಿ ಆರು ದಿನಗಳ ಕಾಲ ನಂದಾದೀಪ, ಛಟ್ಟಿಯಂದು ಭಂಡಾರ ಪೂಜೆ ನಡೆಯುತ್ತದೆ. ಇಲ್ಲಿನ ಭಕ್ತರು ಭಂಡಾರ ಪೂಜೆಯನ್ನು ಕಟ್ಟಿಸುವ ಸೇವೆಯನ್ನು ಮಾಡುವುದು ಒಂದು ವಿಶೇಷವಾಗಿದೆ. ಮನಸೂಳಿಮಲ್ಲಯ್ಯ ಇಲ್ಲಿ ಕೂಡ ಮಾರ್ಗಶೀರ್ಷ ಛಟ್ಟಿಯಲ್ಲಿ ಪ್ರತಿಪದೆಯಿಂದ ಷಷ್ಠಿಯವರೆಗೂ ಪುನಃ ನವರಾತ್ರಿಯಂತೆ ಕಾರ್ಯಕ್ರಮ ನಡೆದು ಛಟ್ಟಿಯೆಂದು ಭಂಡಾರ ಪೂಜೆ ಬರುತ್ತದೆ.

**ಹಿಪ್ಪರಿಗೆ ಮಲ್ಲಯ್ಯ :**

ಈ ದೇವಾಲಯದಲ್ಲಿ "ಭಂಡಾರ ಛಟ್ಟಿ ನವರಾತ್ರಿಯಂತೆ ದೀಪೋತ್ಸವ ಜಾತ್ರೆ ನಡೆಯುತ್ತದೆ. ಈ ದೇವಾಲಯದಲ್ಲಿ ಈಗ ಉತ್ತರ ಬದಿಯಿಂದ ಪ್ರವೇಶಿಸಲು ಬಾಗಿಲು ಇದೆ. ಒಳಗೆ ಪ್ರವೇಶಿಸಿದರೆ ಎದುರುಗಡೆ ದೊಡ್ಡದೊಂದು ಕಟ್ಟೆಯಿದೆ. ಈ ಕಟ್ಟೆಯ ನೆತ್ತಿಯಲ್ಲಿ ಸುಮಾರು ನಾಲ್ಕು ಅಂಗುಲದಷ್ಟು ಸಂದು ಬಿಡಲಾಗಿದೆ. ಈ ಸಂದಿನ ಒಳಗೂ ಕಟ್ಟೆಯ ಗರ್ಭದಲ್ಲಿ ಶ್ರೀಮಲ್ಲಯ್ಯನಿದ್ದಾನೆಂದು ಹೇಳುತ್ತಾರೆ. ದೇವರಿಗೆ ಅಭಿಷೇಕ ಮಾಡುವಾಗ ಸಂದಿಭಾಗದಲ್ಲಿಯೇ ಹಾಲು-ತುಪ್ಪ ಮುಂತಾದ ವಸ್ತುಗಳನ್ನು ಸುರಿಯಲಾಗುತ್ತದೆ. ಮತ್ತು ಭಂಡಾರ ಪೂಜೆಯ ಕಾಲದಲ್ಲಿ ಕಟ್ಟೆಯ ಈ ಭಾಗವೆಲ್ಲಾ ಭಂಡಾರದಿಂದ ಅಲಂಕರಿಸುವ ಕ್ರಮ ಜಾರಿಯಲ್ಲಿದೆ"[೬] ಎಂದು ನೇಗಿನಹಾಳರವರು ಹೇಳಿದ್ದಾರೆ. ಇನ್ನೂ "ಪ್ರೇಮಪುರ ಮೈಲಾರ ಇಲ್ಲಿಯೂ ಕೂಡ ಮಾರ್ಗಶೀರ್ಷ ಮಾಸದ ಛಟ್ಟಿಯಲ್ಲಿ ಮುಖ್ಯ ಉತ್ಸವ ನೆರವೇರುತ್ತದೆ. ಚಟ್ಟಿಯಂದು ನಡೆಯುವ ಭಂಡಾರ ಪೂಜೆಯ ಜೊತೆಗೆ ದೇವರಿಗೆ ಬಾಸಿಂಗ ಕಟ್ಟುವ ಪದ್ಧತಿಯೂ ಇದೆ"[೭] ಇಲ್ಲಿ ಒಂದು ವಿಶೇಷವಾಗಿದೆ ಎಂದು ನೇಗಿನಹಾಳ ಅವರ ಅಭಿಪ್ರಾಯವಾಗಿದೆ.

ಒಟ್ಟಾರೆಯಾಗಿ ಕರ್ನಾಟಕ, ಮಹಾರಾಷ್ಟ್ರ, ಆಂಧ್ರ ಪ್ರದೇಶ ಇನ್ನೂ ಮುಂತಾದ ಕಡೆಯಲ್ಲಿ ಕುರುಬರು ಅಲ್ಲದೇ ಅನ್ಯ ಜಾತಿವರ್ಗದವರು ಸೇರಿ ನಡೆಸುವ ಈ ಭಂಡಾರ ಷಷ್ಠಿ ಹಬ್ಬವನ್ನು ಬೇರೆ-ಬೇರೆ ದಿನ, ಮಾಸ ಮತ್ತು ವಾರಗಳಲ್ಲಿ ನಡೆದರೂ ಕೂಡ ಈ ಹಬ್ಬ ಒಂದು ಮಹತ್ವಪೂರ್ಣವಾದ ಛಟ್ಟಿ ಹಬ್ಬ ಆಚರಣೆಯಾಗಿದೆ. ಈ ಆಚರಣೆಯ ಬಗ್ಗೆ ಹಾಲುಮತ ಸಮುದಾಯದಲ್ಲಿ ತುಂಬ ನಂಬಿಕೆ ಇದೆ ಇದನ್ನು ಚಿಕ್ಕ ದೀವಳಿಗೆ ಎನ್ನುವ ಪರಿಪಾಠವು ಇದೆ.

**ಭಂಡಾರ ಸಿದ್ಧತೆ ಸಂಪ್ರದಾಯ :**

ಮೈಲಾರ ಲಿಂಗನ ಜಾತ್ರೆಗೆ ಮೊದಲು ಭಂಡಾರ ಸಿದ್ಧತೆ ಕಾರ್ಯಕ್ರಮ ಕೈಗೊಳ್ಳಲಾಗುತ್ತದೆ. ಪೌರಾಣಿಕ ಹಿನ್ನೆಲೆಯನ್ನು ನೋಡುವುದಾದರೆ ಅಸುರಮರ್ದನಕ್ಕಾಗಿ ಅಂದು ಭಂಡಾರವನ್ನು ತಯಾರಿಸಿದರೆ ಇಂದು ಲೋಕಕಲ್ಯಾಣಕ್ಕಾಗಿ ಜಗತ್ತಿನ ಸನ್ಮಾಂಗಳಕ್ಕಾಗಿ ಅಸುರೀ ಗುಣಗಳ

ವಿನಾಶಕ್ಕಾಗಿ ಜಾತ್ರೆಗೆ ಮೊದಲು ಭಂಡಾರ ತಯಾರಿಸುತ್ತಾರೆ. ನಂದಿಯ ಕೊಂಬಿನ ಸಂಕೇತವಾಗಿ ಅರಿಷಿನ ಕೊಂಬುಗಳನ್ನು ಬೀಸುತ್ತಾರೆ. ಶಾಸ್ತ್ರೀಯವಾಗಿ ಭಂಡಾರ ತಯಾರಾಗುವುದು ಗುರುವಿನ ನಿವಾಸದಲ್ಲಿ ಶ್ರೀ ಗುರು ಮನೆತನದವರು, ಗೋರವಿಯರು ಅಥವಾ ಮುತ್ತೈದೆಯರು ಮತ್ತು ಸ್ತ್ರೀ–ಪುರುಷ ಬೇಧಭಾವವಿಲ್ಲದೇ ಅರಿಶಿಣದ ಚೂರುಗಳನ್ನು ಬೀಸುವ ಕಲ್ಲಿಗೆ ಹಾಕಿ ಬೀಸುತ್ತಾರೆ. "ಮೊದಲು ಚಂಪಾಷಷ್ಠಿಯಂದು ಐದು ಜನ ಮುತ್ತೈದೆಯರು ಗೋರವಿಯರು ಉಪವಾಸ ಆಚರಿಸುತ್ತಾರೆ. ಮತ್ತು ನದಿಯಲ್ಲಿ ಸ್ನಾನ ಮಾಡಿ ಮಡಿಯಿಂದ ಬರುವರು ಅಕ್ಕಸಾಲಿಗ, ಬಾಬುದಾರರು, ಮಲ್ದಾರರ ಮೂಲಕ ಶ್ರೀ ಗುರುನಿವಾಸಕ್ಕೆ ಕಳಿಸಿದ ಪಂಚರತ್ನಗಳನ್ನು ಅಂದರೆ ಮುತ್ತು, ಬೆಳ್ಳಿ, ಬಂಗಾರ, ವಜ್ರ ಮತ್ತು ಹವಳಗಳನ್ನು ಅರಿಶಿಣದ ಕೊಂಬುಗಳನ್ನು ಬೇಯಿಸಿ ನಂತರ ಕಪಿಲ ಸಿಂಹಾಸನದ ಆವರಣದಲ್ಲಿರುವ ಬೀಸುವ ಕಲ್ಲುಗಳಲ್ಲಿ ಕುಟ್ಟಿದ ಅರಿಶಿಣದ ಕೊಂಬುಗಳನ್ನು ಬೀಸಿ, ಸಣ್ಣಗೆ ಪುಡಿ ಮಾಡುತ್ತಾರೆ"[೮] ಭಂಡಾರವನ್ನು ಸಿದ್ಧಪಡಿಸಲು ಮುತ್ತೈದೆಯರು ಅಥವಾ ಗೋರವಿಯರಾದ ಭಕ್ತರು ಬೀಸುವ ಕಲ್ಲನ್ನು ಬೀಸುವಾಗ ಏಳುಕೋಟಿಯ ನಾಮಸ್ಮರಣೆವಾಗುತ್ತದೆ. ಬೀಸುವಾಗ ಪರಮಾತ್ಮನ ಲೀಲೆಯನ್ನು ಕುರಿತು ಹಾಡುಗಳನ್ನು ಮೈಮರೆತು ಹಾಡುತ್ತಾರೆ ಎಂದು ತಿಳಿಯಬಹುದಾಗಿದೆ. ಉದಾ: ಭಂಡಾರವನ್ನು ತಂಗಿ ಎಲ್ಲಮ್ಮ ಬಂದು ಮಾಡುತ್ತಾಳೆ. ಉಘೇ ಉಘೇ ಎಂದಾಕ್ಷಣ ಭಂಡಾರ ಮೈಲಾರದಲ್ಲಿ ಸುರಿಯುತ್ತದೆ. ಈ ರೀತಿಯಾಗಿ ಭಂಡಾರವನ್ನು ತಯಾರಿಸಿ ಘಮ ಘಮಿಸುವ ಪರಿಮಳಯುಕ್ತವಾದ ಭಂಡಾರ ಶ್ರೀಸ್ವಾಮಿಯ ಅಭಿಷೇಕಕ್ಕೆ ಸಿದ್ಧವಾಗುತ್ತದೆ ಎಂದು ಶ್ರೀಕೃಷ್ಣಪ್ಪನವರು ಹಿರೇಮೈಲಾರದ ಭಂಡಾರ ಸಿದ್ಧತೆಯನ್ನು ತಿಳಿಸಿದ್ದಾರೆ. ಭಂಡಾರ ಸಿದ್ಧತೆಯನ್ನು ಇನ್ನೊಂದು ರೀತಿಯಲ್ಲಿ ನೋಡಬಹುದು. "ಕುರಿಯ ಉಣ್ಣೆ, ಬಂಗಾರ, ಬೆಳ್ಳಿ, ಮತ್ತು ಹವಳ ಸೇರಿಸಿ ನಂತರ ಅರಿಶಿಣ ಪುಡಿಯೊಂದಿಗೆ ಬೆರೆಸಿ ಭಂಡಾರ ತಯಾರಿಸುತ್ತಾರೆಂದು"[೯] ಕುರಿ ಉಣ್ಣಿಯನ್ನು ಹಾಕಿರುವುದರಿಂದ ಇದಕ್ಕೆ 'ಕರಿಯೆಳೆ' ಭಂಡಾರ ಎಂದು ಕರೆಯುತ್ತಾರೆ. ಮೈಲಾರ ಜ್ಯೋತಿ ಮಹಾದರ್ಶನದಲ್ಲಿ ಕಲಾಭೂಷಣ ಯೋಗಾನರಸಿಂಹರವರು ಭಂಡಾರ ಸಿದ್ಧತೆ ಬಗ್ಗೆ ತಿಳಿಸಿದ್ದಾರೆ.

ಒಟ್ಟಾರೆ, ಭಂಡಾರವನ್ನು ಭಟ್ಟಿ ಭಂಡಾರವೆಂದು ಮತ್ತು 'ಕರಿಯೆಳೆ ಭಂಡಾರ'ವೆಂದು ಕರೆಯುತ್ತಾರೆ. ಭಂಡಾರವೆಂಬುದು ಅದನ್ನು ತಯಾರಿಸಲು ಉಪಯೋಗಿಸುವ ಪದಾರ್ಥಗಳು ಸಾಂಕೇತಕವಾಗಿ ಅದರ ಮಹತ್ವ ಮತ್ತು ಬೃಹತ್ ಪ್ರಾಧ್ಯಾನ್ಯತೆಯನ್ನು ಬಿಂಬಿಸುತ್ತದೆ. "ಹಿರೇಮೈಲಾರ, ದೇವರಗುಡ್ಡ ವಿವಿಧ ಕ್ಷೇತ್ರಗಳಲ್ಲಿ ಚಂಪಷಷ್ಠಿ ದಿನದಂದು ಭಂಡಾರವನ್ನು ತಯಾರಿಸುತ್ತಾರೆ. ಆಶ್ಚರ್ಯ ಸಂಗತಿಯೆಂದರೆ ಹಿರೇಮೈಲಾರದಲ್ಲಿ ಎರಡು ತಿಂಗಳ ತರುವಾಯ ನಡೆಯಬೇಕಾದ

ಭಾರತ ಹುಣ್ಣಿಮೆಯ ಕಾರ್ಯಕ್ರಮಗಳ ಅಂದರೆ ಕಾರಣಿಕೋತ್ಸವದ ವೇಳಾಪಟ್ಟಿ ಛಟ್ಟಿಯಂದೇ ಸಿದ್ಧವಾಗಿ ಪ್ರಕಟವಾಗುತ್ತದೆಂದು ನೇಗಿನಹಾಳರು ತಿಳಿಸಿದ್ದಾರೆ. ಅದೇ ನಾಡಿನ ಭಾಗಗಳಲ್ಲಿರುವ ಭಕ್ತರಿಗೆ ಪತ್ರಮುಖಾಂತರ ಅಥವಾ ಜಾಹೀರಾತು, ಹ್ಯಾಂಡ್‌ಬಿಲ್ಲಿನ ಮುಖಾಂತರ ತಿಳಿಸಲ್ಪಡುತ್ತದೆ. ಇದರಿಂದ ಭಂಡಾರ ಪೂಜೆ ಮೂಲತಃ ಕಾರಣಿಕೋತ್ಸವ ಅಥವಾ ಮುಲ್ಲಾಸುರ ವಧೋತ್ಸವದ ಅಂಗವೆಂದು ಸಿದ್ಧವಾಗುತ್ತದೆಂದು ತಿಳಿಯಬಹುದಾಗಿದೆ"[೧೦] ಈ ಭಂಡಾರ ಸಿದ್ಧತೆಯಲ್ಲಿ ಹಾಲುಮತ ಸಮುದಾಯದವರ ಪಾತ್ರ ಮುಖ್ಯವಾಗಿದೆ.

**ಭಂಡಾರ ಒಡೆಯುವ ಸಂಪ್ರದಾಯ :**

ಮೈಲಾರಲಿಂಗನ ಸಂಪ್ರದಾಯದ ಈ ಆಚರಣೆಯು ಚಟ್ಟಿ ಅಮವಾಸ್ಯೆಯ ದಿನ ನಡೆಯುತ್ತದೆ. ಭಂಡಾರ ತಯಾರಿಸಿದ ನಂತರ ಒಂದು ತಟ್ಟೆಯಲ್ಲಿಟ್ಟು ಹೂಗಳಿಂದ ಅಲಂಕರಿಸುವರು ಅಷ್ಟರಲ್ಲಿ ಎಲ್ಲಾ ದೇವರಿಗೆ ಪೂಜೆ ಸಂದಿರುತ್ತದೆ. ಒಡೆಯರು, ಗೋರವರು ಎಲ್ಲರೂ ಸೇರಿ ಭಂಡಾರವನ್ನು ಮುಖ್ಯ ದೇವಾಲಯ ಪ್ರವೇಶಿಸಿ ಸ್ವಯಂಭೂಲಿಂಗವನ್ನು ಅಭೀಷೆಕಮಾಡಿ ಭಂಡಾರದಿಂದ ಪೂಜಿಸುವರು. ವೇದ ಮಂತ್ರಗಳಿಂದ ಶ್ರೀ ಸ್ವಾಮಿಯ ಆ ಶ್ಲೋಕದೊಂದಿಗೆ ವರ್ಣಿಸುತ್ತಾ

"ದ್ಯಾಯೇನ್ಮಲ್ಲಾರಿ ದೇವನಂ ಕನಕಗಿರಿ ನಿಭಂ ವಲ್ಹಾಲಸಾ ಭೂಷಿತಾಂಕಂ।
ಶ್ವೇತಾಶ್ವಖಡ್ಗ ಹಸ್ತಂ ವಿಬುಧ ಬುಧಗಣ್ಯೈಃ ಸರಿಸೇವ್ಯಮಾನಕೃತಾರ್ಥ್ಯೆಃ॥
ಯುಕ್ತಾಂಘ್ರಿಂ ದೈತ್ಯ ಮೂರ್ದ್ನೇಡಮರು ವಿಲಸಿತಂ ಸೈಶಚೂರ್ಣಭಿರಾವಂ।
ನಿತ್ಯಭಕ್ತೇಷು ತಷ್ಟಂಶ್ವಗಣಂ ಪರಿವೃತಂ ಶಂಭುಮೊರಿಕಾರಾಗಮ್ಯ"[೧೧]

ಇದರ ವಿವರಣೆ ನೋಡುವುದಾದರೆ ಶ್ವೇತಾಶ್ವವನ್ನು ಅಂದರೆ ಬಿಳಿಯ ಕುದುರೆಯನ್ನು ವಾಹನವನ್ನಾಗಿಸಿಕೊಂಡು ಕೈಯಲ್ಲಿ ಖಡ್ಗವನ್ನು ಹಿಡಿದು ಮಾಸಲಾದೇವಿ(ಗಂಗಿಮಾಳವ್ವ) ಇಂದ ಕೂಡಿದವನಾಗಿ ಪಾದದಡಿಯಲ್ಲಿ ದೈತ್ಯರ ಶಿರವುಳ್ಳವನಾಗಿ, ಶ್ವಾನ(ನಾಯಿಗಳ) ಬಳಗದಿಂದ ಆವೃತನಾಗಿ ಭಂಡಾರದಿಂದ (ನೈಶಚೂರ್ಣ) ತೊಳೆಯಲ್ಪಟ್ಟವನಿಗೆ ಕನಕ-ಪರ್ವತದಂತೆ, ಮೈಕಾಂತಿಯುಳ್ಳವನಾಗಿದ್ದಾನೆ. ಇದರಲ್ಲಿ ಇನ್ನೆರಡು ಹಸ್ತದ ಪ್ರಸ್ತಾಪವಿಲ್ಲ. ಆದರೂ ಮುಂದುವರೆದು ಶ್ಲೋಕಗಳಲ್ಲಿ ಉಳಿದೆರಡು ಹಸ್ತಗಳಲ್ಲಿ ತ್ರಿಶೂಲ ಹಾಗೂ ಪಾನ ಪಾತ್ರೆಯನ್ನು ಹಿಡಿದಿರುವನೆಂದಿದೆ. ಅದರ ಜೊತೆಗೆ ಕಪಾಲಿ, ರುಂಡ ಮಾಲೆಯನ್ನು ಸೇರಿಸಿ ಹೇಳುವ ಸ್ತೋತ್ರ ಮೊಳಗಿದವು. ಈ ರೀತಿಯಾಗಿ ಅಭಿಷೇಕವನ್ನು ಮಾಡಲಾಗಿದೆ ಎಂದು ವರ್ಣಿಸಲಾಗಿದೆ. ನಂತರ ಗೋರವಿಯರು ಭಂಡಾರದ ತಟ್ಟೆಯನ್ನು ಗರ್ಭಗುಡಿಯಲ್ಲಿ ಒಡೆಯರ ದಂಪತಿಗಳ ಮುಂದಿಡುತ್ತಾರೆ. ನಂತರ ಅರ್ಚಕರು ಮಲ್ಲಾರಿ ಸಹಸ್ರನಾಮ ಪಠಿಸುತ್ತಿರುವಂತೆ ಹೀಗೆ ಪ್ರಾರಂಭವಾದ ಸಮಯದಲ್ಲಿ

“ಒಂದೊಂದು ಸೂತ್ರಕ್ಕೂ ಒಡೆಯರು ಒಂದೊಂದು ಮುಷ್ಟಿ ಭಂಡಾರವನ್ನು ತಟ್ಟೆಯಿಂದ ತೆಗೆದು ಸ್ವಾಮಿಯನ್ನು ಅರ್ಚಿಸಿದರು. ಒಂದು ಸಾವಿರ ಸಲ ಅಂದರೆ ಸಹಸ್ರ ನಾಮಾರ್ಚನೆಯ ನಂತರ ಶ್ರೀ ಸ್ವಾಮಿ ಸಂಪೂರ್ಣವಾಗಿ ಭಂಡಾರವೃತನಾಗಿ ಗೋಪುರ ನಿರ್ಮಾಣವಾಗಿತ್ತು. ಭಕ್ತವೃಂದವು ಯಥಾಶಕ್ತಿ ಭಂಡಾರವನ್ನು ಸ್ವಾಮಿಗೆ ಅರ್ಪಿಸಿ ಭಕ್ತಿಯಿಂದ ಕೃತಾರ್ಥರಾಗುತ್ತಾರೆ”[೧೨] ಎಂದುಅಲ್ಲದೇ “ವಚನದಲ್ಲಿ ನಿಮ್ಮ ನಾಮಾಮೃತ ತುಂಬಿ ನಯನದಲ್ಲಿ ನಿಮ್ಮ ಮೂರುತಿ ತುಂಬಿ ಕಿವಿಯಲ್ಲಿ ನಿಮ್ಮ ಕೀರುತಿ ತುಂಬಿ ಕೂಡಲ ಸಂಗಮದೇವ ನಿಮ್ಮ ಚರಣ ಕಮಲದೊಳಗಾನು ತುಂಬಿ” ಎನ್ನುವ ರೀತಿಯಲ್ಲಿ ಭಂಡಾರ ಪೂಜೆಯ ಸಮಯದಲ್ಲಿ ಭಕ್ತರ ಮಾತು ಕಣ್ಣು ಕಿವಿ ಎಲ್ಲವೂ ಮೈಲಾರಲಿಂಗನಲ್ಲದೇ ಬೇರೆ ಯೋಚಿಸಲು ಮನಸ್ಸು ಆಸ್ಪದವೇ ಕೊಡದೇ ಭಂಡಾರ ಪೂಜೆಯನ್ನು ಮೈಲಾರಲಿಂಗನಿಗೆ ಅರ್ಪಿಸುತ್ತಾರೆ ಎಂದು ಕಲಾಭೂಷಣ ಯೋಗ ನರಸಿಂಹರವರು ಭಂಡಾರಪೂಜೆಯ ಸಮಯದ ವಾತಾವರಣವನ್ನು ವರ್ಣಿಸಿದ್ದಾರೆ.

ಭಂಡಾರ ಪೂಜೆಯ ನಂತರ ಮಂಗಳಾರತಿ ಮಾಡಿದ “ಕಪಿಲಮುನಿ ಸಿಂಹಾಸನಕ್ಕೆ ಬರುವರು. ಅಲ್ಲಿ ಕಂಬಳಿಗದ್ದಿಗೆ ಹಾಸಿ ಅದರ ಮೇಲೆ ಭಂಡಾರದಿಂದ ತ್ರಿಶೂಲ ಬರೆದು ಅದಕ್ಕೂ ಮತ್ತು ಸಿಂಹಾಸನಕ್ಕೂ ಭಂಡಾರ ಏರಿಸಿ ಆರತಿ ಮಾಡಿ, ನೈವೇದ್ಯವಾದ ಮೇಲೆ ಮುಖ್ಯ ದೇವರಗರ್ಭ ಗುಡಿಯಲ್ಲಿ ಭಂಡಾರವನ್ನು ಒಟ್ಟಿ ಬೀಗ ಮುದ್ರೆಯನ್ನು ಹಾಕುವರು. ಮರುದಿನ ಬೀಗ ಮುದ್ರೆ ಒಡೆಯುವರು, ರಾತ್ರಿ ಮೈಲಾರಲಿಂಗದ ಮೇಲೆ ಅರ್ಚನೆ ಮಾಡಿದ್ದ ರಾಶಿ ಬೆಳಗಾಗುವಷ್ಟರಲ್ಲಿ ಒಡೆದಿರುವುದು ಇದನ್ನು ಭಂಡಾರ ಒಡೆಯಿತು ಎಂದು ಹೇಳುವರು”[೧೩] ಬಿ.ಬಿ. ಪಾಟೀಲರವರು ‘ಮೈಲಾರ ದೇವರಗುಡ್ಡ’ದಲ್ಲಿ ವ್ಯಕ್ತಪಡಿಸಿದ್ದಾರೆ.

ಈ ರೀತಿಯಾಗಿ ಭಂಡಾರ ಒಡೆದರೆ ಶುಭಸೂಚನೆಯಂತೆ, ಭಂಡಾರ ಒಡೆಯದಿರುವುದು ಶ್ರೀ ಸ್ವಾಮಿಯ ಸಂತೃಪ್ತಿ ಸಂಕೇತವೆಂದು ತಿಳಿಯಲಾಗಿದೆ. ಭಂಡಾರ ರಾಶಿಯ ಮೇಲೆ ಶ್ರೀಸ್ವಾಮಿಯ ಹಸ್ತ, ಪಾದ ಕುದುರೆಯ ಹೆಜ್ಜೆಯ ಗುರುತು ಮೂಡಿರುವುದು ಇದು ಮೈಲಾರ ಲಿಂಗನ ಗುರುತು ಎಂದು ಭಕ್ತರ ನಂಬಿಕೆಯಾಗಿದೆ. ಹೀಗೆ ಒಡೆದ ಭಂಡಾರವನ್ನು ತಟ್ಟೆಯಲ್ಲಿ ತುಂಬಿಕೊಂಡು ಕಪಿಲಮುನಿ ಸಿಂಹಾಸನಕ್ಕೆ ಬಂದು ಸಿಂಹಾಸನ ಪೂಜಿಸಿ ಒಡೆಯರು ಅದರ ಮೇಲೆ ಆಸೀನರಾಗಿ ಮೊದಲು ಎಲ್ಲಾ ಬಾಬುದಾರರಿಗೆ ನಂತರ ಭಕ್ತರಿಗೆ ಭಂಡಾರವನ್ನು ಹಂಚುವರು ನಂತರ ಭಕ್ತರು ಕಾಣಿಕೆಯ ಸಲ್ಲಿಸುವರೆಂದು ತಿಳಿಯಬಹುದಾಗಿದೆ. “ಭಕ್ತಾವೃಂದವು ಭಂಡಾರವನ್ನು ಪಡೆದ ಮೇಲೆ ಎಲ್ಲರ ಹಣೆಯೂ ಭಂಡಾರದಿಂದ ಶೋಭಿಸುತ್ತವೆ. ಇಲ್ಲಿನ ವಿಶೇಷವೆಂದರೆ ಛಟ್ಟಿಯ ಪೂಜೆಗೆ ಮೊದಲು ದೇವರಿಗೆ ಅರ್ಪಿಸಿದ ಭಂಡಾರ ಒಡೆದು

ಉದ್ಘಾಟಿಸುವವರಿಗೂ ಯಾರು ಭಂಡಾರವನ್ನು ಧರಿಸುವುದಿಲ್ಲ. ಭಂಡಾರ ಒಡೆದ ನಂತರವೇ ಭಂಡಾರವನ್ನು ಹಣೆಗೆ ಧರಿಸುತ್ತಾರೆಂದು"[೧೪] ಕಲಾಭೂಷಣ ಯೋಗ ನರಸಿಂಹರವರು ತಿಳಿಸಿದ್ದಾರೆ.

ಅಂದಿನ ಭಂಡಾರವೇ ಮುಂದಿನ ಇನ್ನೊಂದು ಛಟ್ಟಿಯ ಆಚರಣೆಯವರೆಗೂ ಬಳಕೆಯಾಗುತ್ತದೆ. ಒಡೆಯರು ಮತ್ತು ಗೋರವರು ಮುಂದಿನ ವರ್ಷದ ಛಟ್ಟಿಯವರಿಗೆ ಭಂಡಾರ ಬೆಳೆಸಿಕೊಂಡು ಹೋಗುತ್ತಾರೆಂದು ತಿಳಿಯಲಾಗಿದೆ.

**ಶಿಬಾರ :**

"ಸಾಧಾರಣ ಚೌಕಾಕಾರದ ಕಟ್ಟೆಯೊಂದರ ಮೇಲೆ ದಕ್ಷಿಣ ಉತ್ತರಗಳಲ್ಲಿ ಒಂದೊಂದು ಶಿಲಾಪಟ್ಟಿಕೆ ಅಥವಾ ಶಿಲಾಸ್ತಂಭಗಳನ್ನು ಜೋಡಿಸಿ ಶಿಬಾರ ರಚಿಸುತ್ತಾರೆ. ಈ ಅಡ್ಡಪಟ್ಟಿಕೆಯ ನಟ್ಟನಡುವೆ ತ್ರಿಶೂಲ ಸಂಕೇತವಾಗಿ ಮೂರುಮೊನಚಾದ ಆಕಾರಗಳನ್ನು ಕಲ್ಲಿನಲ್ಲಿಯೇ ಬಿಡಿಸುತ್ತಾರೆ. ಜೊತೆಯಲ್ಲಿ ಎರಡೋ ಮೂರೋ ಕಲ್ಲುಗಳನ್ನು ಕಟ್ಟೆಯ ಮೇಲ್ಗಡೆ ಉದ್ದ ಶಿಲಾಪಟ್ಟಿಕೆಗಳನ್ನು ಮಧ್ಯಭಾಗದಲ್ಲಿ ಇಟ್ಟಿರುತ್ತಾರೆ. ಇಷ್ಟಾದರೆ ಸಾಮಾನ್ಯ ಶಿಬಾರ ಸಿದ್ಧವಾದಂತೆ. ಕೆಲವೊಮ್ಮೆ ಈ ಶಿಬಾರಗಳು ಎರಡು ಅಂತಸ್ತಿನಲ್ಲಿಯೂ ರಚಿಸಲ್ಪಡಬಹುದು. ಇಂಥ ಎರಡು ಅಂತಸ್ತಿನ ಶಿಬಾರಗಳು ಹಿರೇಮೈಲಾರ, ಚಿಕ್ಕಮೈಲಾರ(ಹಾವನೂರು)ಗಳಲ್ಲಿವೆ. ಸಾಮಾನ್ಯವಾಗಿ ಕರ್ನಾಟಕದ ಎಲ್ಲೆಡೆ ಮೈಲಾರ ದೇವರ ಗುಡಿಗಳ ಪರಿಸರದಲ್ಲಿ ಶಿಬಾರಗಳು ಕಂಡುಬರುತ್ತವೆ"[೧೫] ಎಂದು ನೇಗಿಹಾಳರು ತಿಳಿಸಿದ್ದಾರೆ. ಶಿಬಾರ ಪ್ರತಿಮೆ ಮಹಾರಾಷ್ಟ್ರದಲ್ಲಿ ಕಂಡುಬರುವುದಿಲ್ಲ. ಕರ್ನಾಟಕದ ಗುಲ್ಬರ್ಗಾ, ರಾಯಚೂರು ಮತ್ತು ವಿಜಯಪುರ ಜಿಲ್ಲೆಯಲ್ಲಿದ್ದರೆ ದಕ್ಷಿಣದಲ್ಲಿ ಬೆಂಗಳೂರು ಜಿಲ್ಲೆಯ ಕನಕಪುರ ತಾಲೂಕಿನವರೆಗೂ ಶಿಬಾರ ಹರಡಿವೆ. ಪ್ರಸ್ತುತ ಶಿಬಾರ ದಾವಣಗೆರೆ ಜಿಲ್ಲೆಯಲ್ಲಿಯೂ ಸಹ ಕಾಣಬಹುದಾಗಿದೆ. ಈ ಶಿಬಾರದಲ್ಲಿ ಮೈಲಾರಲಿಂಗನನ್ನು ಪೂಜಿಸುತ್ತಾರೆ.

ಕುರುಬರು, ಬ್ರಾಹ್ಮಣರು, ಮಡಿವಾಳರು, ಅನ್ಯಜಾತಿಯ ಭಕ್ತವೃಂದದವರು ಈ ಮೈಲಾರಲಿಂಗವನ್ನು ಪೂಜಿಸುತ್ತಾರೆ. ಇಲ್ಲಿಯೂ ಕೂಡ ಭಂಡಾರಷಷ್ಠಿ ಹಬ್ಬ ಆಚರಣೆಯನ್ನು ಮಾಡುತ್ತಾರೆ. ಬ್ರಾಹ್ಮಣರು ಮತ್ತು ಕುರುಬರು ಹಾಗೂ ಗೋರವ–ಗೋರವಿಯರು ಸೇರಿ ಛಟ್ಟಿ ಹಬ್ಬವನ್ನು ಆಚರಿಸುತ್ತಾರೆ.

ಭಂಡಾರ ಸಿದ್ಧತೆ ಸಂಪ್ರದಾಯವು ಸಹ ಕಾಣಬಹುದಾಗಿದೆ. ಒಂಬತ್ತು ಜನ ಮುತ್ತೈದೆಯರು ಅಥವಾ ಗೋರವಿಯರು ಭಂಡಾರವನ್ನು ಸಿದ್ಧಪಡಿಸುತ್ತಾರೆ. ಇಲ್ಲಿ ಅರಿಷಿನ ಪುಡಿಗೆ ಬಿಲ್ವಪತ್ರಿ ಮತ್ತು ಬಿಳಿಎಕ್ಕೆ ಹೂ, ಬಿಳಿದಾಸವಾಳ ಹೂ, ದತ್ತುರಿ ಬೀಜ, ದೇವದಾರಿ ಬೇರು ಮುಂತಾದ ದ್ರವ್ಯಗಳನ್ನು ಒಣಗಿಸಿ ಪುಡಿಮಾಡಿ ನಂತರ ಪುಡಿಯಾದ ಅರಿಶಿನಕ್ಕೆ ಸೇರಿಸಿ ಭಂಡಾರ ತಯಾರಿಸುತ್ತಾರೆ ಎಂದು ಕುರುಬರಾದ ಗೋರವಯ್ಯನು ಭಂಡಾರ ಸಿದ್ಧತೆಯ ಬಗ್ಗೆ ತಿಳಿಸಿದರು.

ಇಲ್ಲಿನ ಒಂದು ವಿಶೇಷವೆಂದರೆ ಕುರುಬರು ತಮ್ಮ ಮನೆಯಲ್ಲಿ ಭಂಡಾರ ತಯಾರಿಸಿಕೊಂಡು ಪೂಜೆಮಾಡಿ ನಂತರ ಶಿಬಾರದ ಮೈಲಾರಲಿಂಗನ ದೇವಸ್ಥಾನಕ್ಕೆ ತಂದು ಭಂಡಾರಪೂಜೆಗೆ ಕೊಡುತ್ತಾರೆ. ಅದೇ ರೀತಿಯಾಗಿ ಬ್ರಾಹ್ಮಣರು ಸಹ ಭಂಡಾರ ತಯಾರಿಸುತ್ತಾರೆ. ಈ ಎರಡನ್ನು ಅಂದರೆ ಕುರುಬರು ತಂದು ಕೊಟ್ಟ ಭಂಡಾರವನ್ನು ಬ್ರಾಹ್ಮಣರು ತಯಾರಿಸಿದ ಭಂಡಾರವನ್ನು ಭಂಡಾರ ಭಟ್ಟಿಯಂದು ಮೈಲಾರಲಿಂಗನಿಗೆ ಪೂಜೆಮಾಡಿ ಹಿರೇಮೈಲಾರದ ಭಂಡಾರ ಪೂಜೆಯ ರೀತಿಯಲ್ಲಿ ಭಂಡಾರ ರಾಶಿಮಾಡಿ ಪೂಜೆ ಸಲ್ಲಿಸಿದ ಮರುದಿನ ಭಂಡಾರ ಒಡೆಯಿತು ಎಂಬ ಸಂಪ್ರದಾಯ ಕೂಡ ಆಚರಣೆಯನ್ನು ಮಾಡಲಾಗುತ್ತದೆ. ಗೊರವರು, ಗೋರವಿಯರು, ಬ್ರಾಹ್ಮಣರು, ಕುರುಬರು, ಮಡಿವಾಳರು ಕೂಡ ಒಡೆದ ಭಂಡಾರವನ್ನು ಪ್ರಸಾದ ರೀತಿಯಲ್ಲಿ ತೆಗೆದುಕೊಂಡು ಮನೆಯಲ್ಲಿ ಇಟ್ಟು ಪೂಜೆ ಮಾಡುತ್ತಾರೆ. ಇದಕ್ಕೆ ಹಿರೇಮೈಲಾರದ ಭಟ್ಟಿ ಭಂಡಾರದ ಪೊಟ್ಟಣವನ್ನು ತಂದು ಸೇರಿಸಿ ಹಿರೇಮೈಲಾರದ ಭಂಡಾರವೆಂದು ಭಾವಿಸಿ ಪೂಜಿಸುತ್ತಾರೆ. ಮದುವೆ ಸಂದರ್ಭದಲ್ಲಿ ಈ ಭಂಡಾರವನ್ನು ಅರಿಶಿಣ ಪುಡಿಯ ಜೊತೆ ಸೇರಿಸಿ ಅರಿಶಿನವನ್ನು ಮದುಮಕ್ಕಳಿಗೆ ಹಚ್ಚುತ್ತಾರೆ ಎಂದು ಗೋರವಯ್ಯನು ತಿಳಿಸಿದ್ದಾರೆ.

ಕುರುಬರು ಯಾವುದೇ ಒಂದು ಕಾಯಿಲೆ ಬಂದರೂ ಈ ಭಂಡಾರವನ್ನು ಔಷಧ ರೀತಿಯಲ್ಲಿ ಉಪಯೋಗಿಸುತ್ತಾರೆಂದು ಹೇಳಿದ್ದಾರೆ. ಅಲ್ಲಿನ ಅರ್ಚಕನು ಹೇಳುವ ಪ್ರಕಾರ ಮೈಲಾರನು ರಾಕ್ಷಸ ಸಂಹಾರ ಅಥವಾ ಅಸುರ ಮರ್ದನ ಮಾಡಿದಾಗ ಮೈಲಾರನಿಗೆ ಸಣ್ಣ ಪುಟ್ಟ ಗಾಯಗಳು ಆದವಂತೆ ಆಗ ಶ್ರೀ ಸ್ವಾಮಿಯು ಭಂಡಾರವನ್ನು ಆ ಗಾಯಗಳಿಗೆ ಹಚ್ಚಿದಾಗ ಅವನ ಗಾಯಗಳು ವಾಸಿಯಾದವಂತೆ ಎಂದು ಹೇಳಿದ್ದಾರೆ. ಇನ್ನೂ ಗೋರವಿಯರು–ಗೋರಪಯ್ಯನವರು ಪರಸ್ಪರ ಭಂಡಾರವನ್ನು ಧರಿಸಿಕೊಳ್ಳುವ ಸಂಪ್ರದಾಯವಿದೆ. ಮತ್ತು ಬಂದ ಭಕ್ತರಿಗೆ ಭಂಡಾರವನ್ನು ಹಣೆಗೆ ಹಚ್ಚುತ್ತಾರೆ. ಇವರು ಭಂಡಾರವನ್ನು ಹಚ್ಚುವಾಗ ಅವರ ಪಾಪಗಳು ಪರಮಾತ್ಮ(ಮೈಲಾರಲಿಂಗ) ಪರಿಹಾರ ಮಾಡು ಎಂದು ಮನಸ್ಸಿನಲ್ಲಿ ನೆನೆದು ಹಣೆಗೆ ಭಂಡಾರವನ್ನು ಹಚ್ಚುತ್ತಾರೆಂದು ಗೋರವಿಯು ಹೇಳಿದ್ದಾರೆ.

ಇಲ್ಲಿ ಕೂಡ ಹಿರೇಮೈಲಾರದಲ್ಲಿ ನಡೆಯುವ ಸರಪಳಿ ಪವಾಡಗಳು ನಡೆಯುತ್ತವೆ. ಉತ್ಸವ, ಪಲ್ಲಕ್ಕಿ ಸೇವೆಗಳನ್ನು ಆಚರಿಸುತ್ತಾರೆ. ಉತ್ಸವಗಳ ವೈವಿಧ್ಯತೆ ಹೆಚ್ಚಿದಂತೆ ಇವುಗಳ ಸಂಖ್ಯೆ ಹೆಚ್ಚಾಗಿರುತ್ತದೆ. ಮೈಲಾರಲಿಂಗನ ಸಂಪ್ರದಾಯದಲ್ಲಿ ಅಪೂರ್ವ ವೈಶಿಷ್ಟ್ಯಗಳಲ್ಲಿ ಒಂದಾಗಿದೆ. ಶಿಬಾರಗಳಿಂದ ಆಚರಣೆಗಳಿಗೆ ಒಂದು ಸ್ಥಾಯಿತ್ವ ಪ್ರಾಪ್ತವಾದಂತೆ ಇತರೆ ಅನುಕೂಲಗಳು ಉಂಟಾದವು. ಅದರಿಂದಾಗಿ ಬೇರೆಯವರೂ ತಮ್ಮ ಪೂಜಾ ಸ್ಥಾನವನ್ನು ಆಕ್ರಮಿಸಿದಂತೆ

ಗಡಿರೇಖೆಯನ್ನು ಗುರುತಿಸಲು ಸಹಾಯವಾಗಿದೆ. ರಾತ್ರಿ ಹೊತ್ತಿನಲ್ಲಿ ನಡೆಯಬೇಕಾದ ಆಚರಣೆಗಳಿಗೆ ಒಂದು ಸ್ಥಾನ ತಮ್ಮ ತಮ್ಮ ಊರಿನಲ್ಲಿ ಸಿದ್ಧವಾದಂತೆ ಕಾಣುತ್ತದೆ. ಆದರೆ ಈ ಶಿಬಾರ ಕಲ್ಪನೆ ಕರ್ನಾಟಕದಲ್ಲಿ ಮಾತ್ರ ವಿಶೇಷ ಸ್ಥಾನ ಪಡೆದುಕೊಡಿರುವುದು ಒಂದು ವಿಶೇಷವಾದ ಸಂಗತಿಯಾಗಿದೆ. ಈ ಶಿಬಾರಗಳಲ್ಲಿ ಭಂಡಾರ ಸಂಪ್ರದಾಯ ಆಚಣೆಗಳಿಗೆ ಮಹತ್ವದ ಸ್ಥಾನ ದೊರೆತಿದೆ ಎಂಬುದು ಸತ್ಯದ ಸಂಗತಿಯಾಗಿದೆ.

**ಖಂಡೋಬ–ಸಂಪ್ರದಾಯ :**

ಮೈಲಾರ ದೇವರು ಕರ್ನಾಟಕ, ಆಂಧ್ರ ಮತ್ತು ಮಹಾರಾಷ್ಟ್ರಗಳಲ್ಲಿ ಪ್ರಾಚೀನ ಕಾಲದಿಂದಲೂ ಮೈಲಾರಲಿಂಗ "ಮಲ್ಲಯ್ಯ" ಖಂಡೋಬಾ ಇತ್ಯಾದಿ ಹೆಸರುಗಳಿಂದ ಪ್ರಸಿದ್ಧನಾಗಿರುವ ಜಾನಪದ ದೇವತೆ. ಮಹಾರಾಷ್ಟ್ರದಲ್ಲಿ "ಖಂಡೋಬ" ಎಂದು ಕರೆಸಿಕೊಂಡಿರುವ ದೇವರ ಸಂಪ್ರದಾಯ ಮೂಲತಃ ಮೈಲಾರಲಿಂಗನ ಸಂಪ್ರದಾಯವೇ ಎಂಬುದು ಶಂಬಾಜೋಶಿ, ರಾ.ಚಿಂ., ಡೇರೆ... ಮೊದಲಾದ ವಿದ್ವಾಂಸರುಗಳ ಅಭಿಪ್ರಾಯವಾಗಿದೆ.

**ಪಾಲಿ–ಪೆಂಬರನ ಖಂಡೋಬ :**

"ಪುಣೆ–ಕೊಲ್ಲಾಪುರ ರಾಷ್ಟ್ರೀಯ ಹೆದ್ದಾರಿಯ ಮೇಲೆ ಸಾತಾರೆಯಿಂದ ದಕ್ಷಿಣಕ್ಕೆ ಸುಮಾರು ೧೫ ಮೈಲುಗಳ ಅಂತರದಲ್ಲಿ 'ಕಾಶಿಳ' ಎಂಬ ಊರು ಇದೆ. ಇಲ್ಲಿಂದ ಪಶ್ಚಿಮಕ್ಕಿರುವ ಕೋಪರ್ಡೆತಾರಳೆ ರಸ್ತೆಯ ಮೇಲೆ ಸುಮಾರು ನಾಲ್ಕೂವರೆ ಮೈಲುಗಳ ಅಂತರದಲ್ಲಿ ಪಾಲ ಅಥವಾ ಪಾಲಿ ಎಂಬ ಗ್ರಾಮವಿದೆ. ಈ ಗ್ರಾಮಕ್ಕೆ ಹೊಂದಿ ವಾಯುವ್ಯದಿಂದ ಆಗ್ನೇಯ ದಿಕ್ಕಿನ ಕಡೆಗೆ ತಾರಳಿ ನದಿ ಹರಡಿದೆ. ಈಗ ಹೊಸದಾಗಿ ಕಟ್ಟಲಾಗಿರುವ ಸೇತುವೆ ಇವೆರಡನ್ನು ಜೋಡಿಸಿದೆ. ಪ್ರಸ್ತುತ ನದಿಯ ಪಶ್ಚಿಮ ಭಾಗವನ್ನು 'ಪಾಲ' ಎಂದೂ ಪೂರ್ವ ಭಾಗವನ್ನು ರಾಜಾಪುರವೆಂದು ಕರೆಯುತ್ತಾರೆ. ಪೂರ್ವದ ರಾಜಾಪುರ ಭಾಗದಲ್ಲಿ ಪ್ರಾಚೀನವಾದ ಶ್ರೀ ಖಂಡೋಬ ದೇವರ ಗುಡಿ ಇದೆ".[೧೬] ಎಂದು ನೇಗಿನಹಾಳ ತಿಳಿಸಿದ್ದಾರೆ.

ಪಾಲಾಯಿ ಎಂಬ ಗೌಳಿಗಿತ್ತಿಯ ಭಕ್ತಿಕಾರಣವಾಗಿಯೇ ದೇವರು ಪೇಂಬರ(ಪ್ರೇಮಪುರ ಮೈಲಾರ–ಬೀದರ್)ದಿಂದ ಪಾಲಿಗೆ ಬಂದು ನೆಲೆಸಿದನೆಂದು ಮಹಾರಾಷ್ಟ್ರದ ಭಕ್ತರು ನಂಬುತ್ತಾರೆ.

"ಈ ದೇವಾಲಯದಲ್ಲಿ ನಿತ್ಯ ಎರಡು ಹೊತ್ತು ಪೂಜೆ ನಡೆಯುತ್ತದೆ. ಮಾರ್ಗ ಶೀರ್ಷ ಮಾರ್ಗದಲ್ಲಿ ಛಟ್ಟಿ ಭಂಡಾರ ಪೂಜೆ ನಡೆಯುತ್ತದೆ. ಪ್ರತಿಪದೆಯಿಂದ ಛಟ್ಟಿಯವರೆಗೆ ನಿತ್ಯಪೂಜೆಯ ಕಾರ್ಯಕ್ರಮ ಈಗಲೂ ಪ್ರತಿಪದೆಯಿಂದ ಘಟಸ್ಥಾಪನೆ ಮಾಡಿ ಆರು ದಿನಗಳ ಕಾಲ ಕೀರ್ತನೆ, ಭಜನೆಗಳು ನಡೆಯುತ್ತವೆ. ಛಟ್ಟಿಯಂದು ಬೆಳಿಗ್ಗೆ ದೇವರ ಜನ್ಮೋತ್ಸವ. ಅಂದು ಎಣ್ಣೆ ಮಜ್ಜನ(ಅಭ್ಯಂಜನ) ಮಾಡಿ ಭಂಡಾರ ಏರಿಸಿ ಪೂಜೆ ಮಾಡುತ್ತಾರೆ[೧೭] ಎಂದು ನೇಗಿನಹಾಳರವರು ತಿಳಿಸಿದ್ದಾರೆ.

“ಖಂಡೋಬನ ಜಾತ್ರೆಯಲ್ಲಿ ಜನ ಭಂಡಾರ-ಕೊಬ್ಬರಿಗಳನ್ನು ವಿಪರೀತ ತೂರುತ್ತಾರೆ. ಹರಕೆ ಹೊತ್ತ ಭಕ್ತರು ಕೆಲವೊಮ್ಮೆ ತಮ್ಮ ತೂಕದಷ್ಟು ಭಂಡಾರ ಕೊಬ್ಬರಿಗಳನ್ನು ಹಾರಿಸುವುದುಂಟು. ಉತ್ಸವಕ್ಕೆ ರಾಮೋಶಿ(ಬೇಡ) ಮತ್ತು ಕೋಳಿ(ಬೆಸ್ತ) ಜಾತಿಯ ಜನ ಸಮುದಾಯ ಸೇರುವುದು ವಿಶೇಷವಾಗಿದೆ. ಕುರುಬ ಮತ್ತು ಮರಾಠ ಜನರಂತೂ ಸೈಯೇಸೈ ಇತರ ಎಲ್ಲ ವರ್ಗದ ಜನರೂ ಇಲ್ಲಿ ನಡೆದುಕೊಳ್ಳುತ್ತಾರೆ. ಇಲ್ಲಿಯ ಪೂಜಾರಿಗಳು ‘ಗುರುವರು’ ಎಂದರೆ ನಮ್ಮಲ್ಲಿಯ ಹೂಗಾರರು ಅಭಿಷೇಕಕ್ಕೆ ಬ್ರಾಹ್ಮಣ, ಪೂಜಾರಿಗಳು ಬಂದು ಹೋಗುತ್ತಾರೆ. ಮಹಾರಾಷ್ಟ್ರದ ದೇವಾಲಯಗಳಲ್ಲಿ ಇದೇ ಪ್ರಾಚೀನ ದೇವಾಲಯವೆಂಬ ನಂಬಿಕೆಯಿದೆ”[೧೮] ಎಂದು ನೇಗಿನಹಾಳರು ಉಲ್ಲೇಖಿಸಿದ್ದಾರೆ.

**ಜಿಜೂರಿ ಖಂಡೋಬಾ :**

ಜಿಜೂರಿ ಊರು ಪುಣೆ ಜಿಲ್ಲೆಯ ಪುರಂದರ ತಾಲೂಕಿನಲ್ಲಿದೆ. “ಸ್ವಯಂಭೂಲಿಂಗ ಮತ್ತು ಆನಂದಾಸನದಲ್ಲಿರುವ ಖಂಡೋಬಾ ಅಥವಾ ಮಾರ್ತಂಡ ಭೈರವನ ಕಪ್ಪು ಶಿಲೆಯ ಮೂರ್ತಿಯಿದೆ. ಈ ದೇವಾಲಯದಲ್ಲಿ “ಚೈತ್ರಶುದ್ಧ ದ್ವಾದಶಿಯಿಂದ ಹುಣ್ಣಿಮೆಯವರೆಗೆ ಮಾರ್ಗಶೀರ್ಷ ಅಮವಾಸ್ಯೆಯಿಂದ, ಪುಣ್ಯ ಶುದ್ಧ ಹುಣ್ಣಿಮೆಯವರೆಗೆ ಹಾಗೂ ಪ್ರತಿ ಸೋಮವತಿ ಅಮಾವಾಸ್ಯೆಯಂದು ಇಲ್ಲಿ ಜಾತ್ರೆ ನಡೆಯುತ್ತದೆ. ಅಶ್ವೀನ ಮಾಸದ ನವರಾತ್ರಿ ಮತ್ತು ಮಾರ್ಗ ಶೀರ್ಷದ ವಾಂಗೀಸಟಿ ಅಥವಾ ಭಂಡಾರ ಛಟ್ಟಿಗಳು ಪ್ರಧಾನವಾದ ಹಬ್ಬಗಳು. ಛಟ್ಟಿಯಲ್ಲಿ ಪಾಡ್ಯದಂದು ಘಟಸ್ಥಾಪನೆ ಜರುಗುತ್ತದೆ”[೧೯] ದೇವರಿಗೆ ಪಂಚಮಿಯಂದು ತಿಳವಣಾಚಾ ಹಂಡಾ ಅರ್ಪಿಸುವ ಕಾರ್ಯಕ್ರಮ ನಡೆಯುತ್ತದೆ. ಭಕ್ತರು ದೇವರಿಗೆ ಎಣ್ಣೆ ಅರ್ಪಿಸಿ ಹಾಗೂ ಆ ಎಣ್ಣೆಯಿಂದ ದೇವರಿಗೆ ಎಣ್ಣೆ ಮಜ್ಜನ ಮಾಡಿಸುತ್ತಾರೆ. ಭಂಡಾರ ಛಟ್ಟಿಯಂದು ಬೆಳಿಗ್ಗೆ ದೇವರ ಅಭಿಷೇಕ ನಡೆದು ತರುವಾಯ ಭಂಡಾರ ಅರ್ಪಿಸಲಾಗುತ್ತದೆ.

ಖಂಡೋಬಾ ದೇವಾಲಯದಲ್ಲಿ “ಹೊಸ ಮದುಮಕ್ಕಳು ಜತೆಯಾಗಿ ದೇವಾಲಯಕ್ಕೆ ಬಂದು ತಟ್ಟೆಯೊಂದರಲ್ಲಿ ಎಲೆ, ಅಡಿಕೆ, ಭಂಡಾರ ಮತ್ತು ಕೊಬ್ಬರಿ ಬಟ್ಟಲುಗಳನ್ನು ಇಟ್ಟು ದೇವರ ಎದುರಿಗೆ ಏಳುಕೋಟಿ, ಏಳುಕೋಟಿ ಮಲ್ಹಾರ ಎಂದು ಹೇಳುತ್ತಾ ಮೂರು ಬಾರಿ ತಟ್ಟೆಯನ್ನು ಎತ್ತುತ್ತಾರೆ. ತರುವಾಯ ಕಾಯ್-ಕೋಲು ದೀವಟಿಗೆಯಿಂದ ದೇವರಿಗೆ ಆರತಿ ಮಾಡುತ್ತಾರೆ. ಭಂಡಾರ ಕೊಬ್ಬರಿಗಳನ್ನು ಹಾರಿಸುತ್ತಾರೆ. ಇದನ್ನು ಮಹಾರಾಷ್ಟ್ರೀಯರು ‘ತಳೀಭರಣೆ’ ಎಂದು ಹೇಳುತ್ತಾರೆ. ಇದು ಮಹಾರಾಷ್ಟ್ರದ ಖಂಡೋಬನ ಆಚರಣೆಯಾಗಿದೆ. ಇಲ್ಲಿ ಭಂಡಾರವನ್ನು ದೇವರಿಗೆ ಕಾಗದದಲ್ಲಿ ಪೊಟ್ಟಣಕಟ್ಟಿ ಅರ್ಪಿಸುವುದಿಲ್ಲ. ಬದಲು ಹೊಸ ಬಟ್ಟೆಯಿಂದ ತಯಾರಿಸಿದ ಸಣ್ಣ-ದೊಡ್ಡ ಚೀಲಗಳಲ್ಲಿ ತುಂಬಿ ತಮ್ಮ ಶಕ್ತ್ಯಾನುಸಾರ ಕೊಬ್ಬರಿ ಬಟ್ಟಲು ಕೊಂಡು ಹೋಗಿ

ಆ ಬಟ್ಟಲುಗಳಲ್ಲಿ ಅರ್ಪಿಸುತ್ತಾರೆ. ಪೂಜಾರಿ ಅದನ್ನು ದೇವರಿಗೆ ಅರ್ಪಿಸಿಕೊಬ್ಬರಿ ಮುರಿದು ಪ್ರಸಾದವೆಂದು ಕೊಡುತ್ತಾರೆ ಎಂದು ತಿಳಿಯಬಹುದಾಗಿದೆ. ಅಲ್ಲದೇ ಈ ದೇವಾಲಯದಲ್ಲಿ ಒಂದು ವಿಶೇಷವೆಂದರೆ ಭಂಡಾರವನ್ನು ದೇವರ ಮೂರ್ತಿಯ ಮೇಲೆ ತೂರಲಾಗುತ್ತದೆ. ತೂರುವಾಗ ಏ..ಏ.. ಚಾಂಗಭಲೆ, ಸದಾನಂದಚಾ ಏಳಕೋಟ ಏಳಕೋಟ ಮಲ್ಲಾರ ಎಂದು ಉದ್ಘೋಷ ಮಾಡುತ್ತಾರೆ"[೨೦] ಎಂದು ನೇಗಿನಹಾಳರು ಉಲ್ಲೇಖಿಸಿದ್ದಾರೆ.

**ಹುಲಿಗೆಮ್ಮ-ಸಂಪ್ರದಾಯ :**

ಸಿಂಧೂ ನಾಗರಿಕತೆಯ ಕಾಲದಲ್ಲಿಯೇ ಮಾತೃದೇವತೆಯ ಆರಾಧನೆ ಇತ್ತು ಎಂಬುದು ಇತಿಹಾಸದಿಂದ ತಿಳಿದು ಬರುತ್ತದೆ. ಈ ನಾಗರಿಕತೆಯನ್ನು ಹುಟ್ಟು ಹಾಕಿದ ಈ ಸ್ತ್ರೀದೇವತೆಗಳಿಗೆ ಲೆಕ್ಕವೆ ಇಲ್ಲ. ಪುರುಷರ ದೇವತೆಗಳಿಗಿಂತ ಸ್ತ್ರೀದೇವತೆಗಳೇ ಹೆಚ್ಚಾಗಿ ಗ್ರಾಮಗಳ ಅಧಿದೇವತೆಗಳಾಗಿದ್ದಾರೆ. ಹಾಲುಮತಸ್ಥರ ಭಂಡಾರ ದೇವರಲ್ಲಿ ಸ್ತ್ರೀದೇವತೆಗಳು ಸಹ ಪ್ರಾಧಾನ್ಯತೆಯನ್ನು ಪಡೆದುಕೊಂಡಿದ್ದಾರೆ. ಮೈಲಾರ, ಖಂಡೋಬ, ಬೀರಲಿಂಗ ಮುಂತಾದ ಪುರುಷ ದೈವಗಳಂತೆ ಎಲ್ಲಮ್ಮ ಅಥವಾ ಹುಲಿಗೆಮ್ಮ, ಜಂಜಲಮ್ಮ, ಮಾರಮ್ಮ, ಮಾಯವ್ವ, ಮಹಾಕಾಳಿ, ದುರ್ಗಮ್ಮ, ಸಂಕಲಮ್ಮ, ಚೌಡಮ್ಮ, ಲಕ್ಷ್ಮೀ, ಮಸಣಮ್ಮ ಇತ್ಯಾದಿ ಸ್ತ್ರೀ ದೇವತೆಗಳು ಭಂಡಾರ ಪ್ರತೀಕವಾಗಿದ್ದಾರೆ.

ಪ್ರಸ್ತುತ ಹುಲಿಗೆಮ್ಮನು, ಕರ್ನಾಟಕದ ಜಿಲ್ಲೆಯ ಮುನಿರಾಬಾದ್ ಗ್ರಾಮವು ಹುಲಿಗೆಮ್ಮ ಕ್ಷೇತ್ರವಾಗಿದೆ. ಹುಲಿಗಿ ಕ್ಷೇತ್ರದಲ್ಲಿ ಕುರುಬರು, ಮಾದಿಗರು, ಖಾಟಿಕ್‌ರು, ಬೆಸ್ತರು ಹೀಗೆ ಎಲ್ಲಾ ಜಾತಿಯ ಜನಾಂಗವನ್ನು ಕಾಣಬಹುದಾಗಿದೆ. ಹೊಸಪೇಟೆ ಜನರು ಪ್ರತಿ ಮಂಗಳವಾರ ಮತ್ತು ಶುಕ್ರವಾರದಂದು ಪೂಜೆ ಸಲ್ಲಿಸುತ್ತಾರೆ. ಹುಲಿಗಿ ಕ್ಷೇತ್ರಕ್ಕೆ ಕರ್ನಾಟಕ, ಆಂಧ್ರಪ್ರದೇಶ ಮತ್ತು ಮಹಾರಾಷ್ಟ್ರಗಳಿಂದಲೂ ಜನರು ಬಂದು ಹುಲಿಗೆಮ್ಮನ ದರ್ಶನ ಪಡೆಯುತ್ತಾರೆ. ಎಂದು ತಿಳಿಯಲಾಗಿದೆ.

"ಪೌರಾಣಿಕವಾಗಿ ಜಾನಪದ ಹಿನ್ನೆಲೆಯಾಗಿ ಹೇಳುವುದಾದರೆ ಎಲ್ಲಮ್ಮನೇ ಹುಲಿಗೆಮ್ಮಳ ರೂಪದಲ್ಲಿ ಹುಲಿಗಿಯಲ್ಲಿ ಪ್ರತ್ಯಕ್ಷಳಾಗಿದ್ದಾಳೆ ಎಂಬ ನಂಬಿಕೆ ಹಿನ್ನೆಲೆಯಲ್ಲಿ ಇದು ಸಹಜವೂ ಹೌದು. ಪುರಾಣ ಕತೆಯೂ ಹೌದು. ಮತ್ಸ್ಯಪುರಾಣ, ವಾಯುಪುರಾಣ, ಮಾರ್ಕಂಡೇಯ ಪುರಾಣ, ಸ್ಕಂದಪುರಾಣ ಮಾತ್ರವಲ್ಲದೇ ರಾಮಾಯಣ, ಮಹಾಭಾರತಗಳಲ್ಲಿ ಉಲ್ಲೇಖ ಕಾಣಬಹುದಾಗಿದೆ. ಜಮದಗ್ನಿ-ರೇಣುಕ ಮತ್ತು ಪರಶುರಾಮನೇ ಇಲ್ಲಿನ ಮುಖ್ಯಪಾತ್ರಗಳಾಗಿವೆ"[೨೧] ಹುಲಿಗೆಮ್ಮನಿಗೆ ವ್ಯಾಘ್ರೇಶ್ವರಿ ಕರೆಯುತ್ತಾರೆಂದು ವೈದಿಕರ ವಾದವಾಗಿದೆ. ಹುಲಿಗೆಮ್ಮನ ಅಣ್ಣ ಮೈಲಾರಲಿಂಗನು ಈತನು ಎಲ್ಲಮ್ಮದೇವಿಯ ಅಣ್ಣ, ಮೈಲಾರನ ಜಾತ್ರೆ ಕರ್ನಾಟಕದಲ್ಲಿಯೇ

ಅತಿದೊಡ್ಡ ಜಾತ್ರೆ, "ಹುಲಿಗೆಮ್ಮಳು ಮೈಲಾರಲಿಂಗನ ಮದುವೆಗೆಂದು ಮೈಲಾರಕ್ಕೆ ಹೋದಾಗ ಈತನ ಹತ್ತಿರ ಖಂಡುಗದ ಭಂಡಾರವಿರುವುದನ್ನು ಕಂಡು ಅಣ್ಣನ ಹತ್ತಿರ ಹೋಗಿ ಅಣ್ಣ ನನಗೆ ಸ್ವಲ್ಪ ನಿನ್ನ ಭಂಡಾರ ಕೊಡೆಂದು ಕೇಳಿದರೂ ಮೈಲಾರಲಿಂಗ ಕೊಡಲಿಲ್ಲವಂತೆ. ಎಷ್ಟು ಗೋಗರೆದರೂ ಕೊಡಲಿಲ್ಲವಾದ್ದರಿಂದ ಹುಲಿಗೆಮ್ಮ ಉಪಾಯ ಮಾಡುತ್ತಾಳೆ. ಮೈಲಾರಲಿಂಗನು ಸ್ನಾನಕೆಂದು ಹೋದಾಗ ಹುಲಿಗೆಮ್ಮ ಭಂಡಾರವನ್ನು ಕದ್ದು ಓಡಿಕೊಂಡು ಬಂದು ಸುಸ್ತಾಗಿ ಹುಲಿಗಿ ಕ್ಷೇತ್ರದಲ್ಲಿ ಕೂರುತ್ತಾಳೆ ಆ ಜಾಗವು ಹುಲಿಗೆಮ್ಮನಿಗೆ ಚೆನ್ನಾಗಿ ಕಂಡಿದ್ದರಿಂದ ಇನ್ನೂ ಮೇಲೆ ಇದೆ. ನನ್ನ ಕ್ಷೇತ್ರವಾಗಿ ಬೆಳೆಯಲಿ ಎಂದು ಭಂಡಾರವನ್ನು ಉಗ್ಗುತ್ತಾಳೆ. ಅಂದಿನಿಂದ ಹುಲಿಗೆಮ್ಮಳು ಈ ಕ್ಷೇತ್ರದಲ್ಲಿ ನೆಲೆಸಿದಳು ಎಂದು ಮೌಖಿಕವಾಗಿ ದೊರೆಯುವ ಕಥೆಯೊಂದು ವಿವರಿಸುತ್ತದೆ"[೨೨] ಎಂದು ಕೃಷ್ಣವೇಣಿ ತಿಳಿಸಿದ್ದಾರೆ. ಹುಲಿಗೆಮ್ಮ ಭಂಡಾರದ ಮಾಯಕಾರತಿ ಎನ್ನುತ್ತಾರೆ.

ತನ್ನ ಭಂಡಾರದಿಂದ ಎಲ್ಲಾ ಭಕ್ತರನ್ನು ಪಡೆದು ಹುಲಿಗೆಮ್ಮಳಾದಳು ಎಂಬ ನಂಬಿಕೆಯು ಜನಪದರಲ್ಲಿ ಕಾಣಬಹುದಾಗಿದೆ. ಭಕ್ತರು ಹುಲಿಗೆಮ್ಮನಿಗೆ ಭಂಡಾರ ಕುಂಕುಮ ಎರಚುತ್ತಾರೆ. ಅಲ್ಲದೇ ದೇವಸ್ಥಾನದ ತುಂಬ ಭಂಡಾರವನ್ನು ಎರಚುತ್ತಾ ಭಕ್ತಿಯನ್ನು ಪ್ರದರ್ಶಿಸುತ್ತಾರೆ.

ಹುಲಿಗೆಮ್ಮನ ದೇವಸ್ಥಾನದ ಅರ್ಚಕರಾದ ಸತ್ಯನಾರಾಯಣ ಬೇವಿನಭಟ್ ದೋನಿ ಅವರ ಪ್ರಕಾರ ಭಂಡಾರ ಎಂದರೆ ಗುಡ್ಡವಿದ್ದಂತೆ ಅಂದರೆ ಭಂಡಾರದ ಗುಡ್ಡ ಎಂದು ಹುಲಿಗೆಮ್ಮ ಭಂಡಾರದ ಗುಡ್ಡದಲ್ಲಿ ಮೂಡಿದ್ದಾಳೆಂಬ ನಂಬಿಕೆಯನ್ನು ವ್ಯಕ್ತಪಡಿಸಿದ್ದಾರೆ. ಉದಾ: ಎಲ್ಲಮ್ಮನು ಭಂಡಾರ ದೇವತೆ, ಮೈಲಾರಲಿಂಗ ಭಂಡಾರದ ಒಡೆಯ ಇವರ ಕ್ಷೇತ್ರಕ್ಕೆ ಹೋಗುವಾಗ ಜನಪದರು ಎಲ್ಲಮ್ಮನ ಗುಡ್ಡ ಮತ್ತು ಮೈಲಾರ ಗುಡ್ಡ ಎಂಬರ್ಥದಲ್ಲಿ ಹೇಳುತ್ತಾರೆ. ಇದು ಭಂಡಾರ ಗುಡ್ಡ ಎಂಬರ್ಥವನ್ನು ತೋರಿಸುವ ವ್ಯಾಖ್ಯಾವಾಗಿದೆ.

ಇನ್ನೂ ಜನಪದರು ಹುಲಿಗೆಮ್ಮನ ಭಂಡಾರವನ್ನು ಬಂಗಾರ ಎಂದು ಹೇಳುತ್ತಾರೆ. ಪೂಜೆ ಮಾಡುವ ಅರ್ಚಕರು ಸಹಾ ಭಂಡಾರವನ್ನು ಬಂಗಾರ ಎಂಬ ಭಾವನೆಯನ್ನು ವ್ಯಕ್ತಪಡಿಸುತ್ತಾರೆ. ಶುಭಕಾರ್ಯದಲ್ಲಿ ಮನಸಾರೆ ಭಕ್ತಿಯಿಂದ ದೇವರ ಸ್ಮರಿಸುತ್ತಾ ಭಂಡಾರವನ್ನು ಬಳಸುತ್ತೇವೆಂದು ಹುಲಿಗೆಮ್ಮನ ಭಕ್ತನು ಭಂಡಾರದ ಬಳಕೆಯನ್ನು ವ್ಯಕ್ತಪಡಿಸಿದ್ದಾರೆ.

ಜನಪದ ಸಾಹಿತ್ಯದಲ್ಲಿ ಭಂಡಾರವನ್ನು ಈ ರೀತಿಯಾಗಿ ವರ್ಣಿಸಿದ್ದಾರೆ.

"ಹುಲಿಗೆಮ್ಮನ ಗುಡಿಮುಂದೆ ಭಂಡಾರ
ಬರುವ ಭಕ್ತರಿಗೆಲ್ಲ ಬಂಗಾರ

ಅವರ ಹಣೆ ಮೇಲೆ ಇಕ್ಕಿದರೆ ಶೃಂಗಾರ ಪ್ರೀತಿಯ ಮಾತಿಗೆ
ಉದೋ ಉದೋ ಹುಲಿಗೆವ್ವಗೆ"[೨೩]
"ಐದನೇ ಶತಮಾನದಲ್ಲಿ ಧರೆಗಳಿದ ದೇವತೆ ನೀನು
ಉದೋ ಉದೋ ಎಂದ ಜನರಿಗೆ ಭಂಡಾರ ಧರಿಸಿದ ತಾಯಿ
ಎಷ್ಟು ದ್ಯಾನ ಮಾಡಲಮ್ಮ ತಾಯಿ ಹುಲಿಗೆಮ್ಮ"[೨೪]

ಎಂಬ ಜನಪದ ಸಾಹಿತ್ಯದಲ್ಲಿ ಭಂಡಾರದ ಮಹತ್ವ ವ್ಯಕ್ತವಾಗಿದೆರುವುದನ್ನು ಕಾಣಬಹುದಾಗಿದೆ.

ಎಲ್ಲಮ್ಮ, ಹುಲಿಗೆಮ್ಮ, ದ್ಯಾಮವ್ವ, ಕಾಳಮ್ಮ, ಮಾರೆಮ್ಮ, ಸಿಡುಬಮ್ಮ ಮುಂತಾದ ದೇವತೆಗಳು ಭಂಡಾರ ಕುಂಕುಮದಿಂದ ಪೂಜೆ ಮಾಡುತ್ತಾರೆ. ಎಲ್ಲಮ್ಮನ ಭಂಡಾರದ ಬಗ್ಗೆ ಜೋಗುತಿಯರು ಹಾಡಿದ್ದಾರೆ ಮತ್ತು ಗರತಿಯರ ವರ್ಣನೆಯನ್ನು ಕಾಣಬಹುದಾಗಿದೆ.

"ನಿನ್ನ ಕೈಯಲ್ಲಿ ಉರಿಯಪತಿ ಮಾದೇವಿ
ನಿನ್ನ ಕೈದೊಳಗ ಭಂಡಾರ ಪರಡಿ ಮಾದೇವಿ
ನಿನ್ನ ಕಾಲಲ್ಲಿ ಗಿಲ್‌ಗಿಲ್ ಗೆಜ್ಜೆ ಮಾದೇವಿ"[೨೫]

ಇನ್ನು ಕಾಳಮ್ಮನ ಭಕ್ತರು ಕಾಳಮ್ಮನ ಉಡಿಯಲ್ಲಿ ಭಂಡಾರ ತುಂಬಿಕೊಂಡು ಹಣೆಯಲ್ಲಿ ಕುಂಕುಮ ಹಚ್ಚಿಕೊಂಡಿರುವಳು ಎಂದು ಹೇಳುತ್ತಾರೆ. ಜನಪದರು ಸ್ತ್ರೀ ದೇವತೆಗಳನ್ನು ಭಂಡಾರ, ಕುಂಕುಮ, ಬಂಗಾರದಿಂದ ಅಲಂಕರಿಸುತ್ತಾರೆ ಎಂದು ತಿಳಿಯಬಹುದಾಗಿದೆ.

**ಅಗ್ನಿಕೊಂಡ ಹಾಯುವುದು :**

ಹುಲಿಗೆಮ್ಮನ ಜಾತ್ರೆಯಲ್ಲಿ ಹಲವು ಪವಾಡಗಳು ನಡೆಯುತ್ತವೆ. ಅದರಲ್ಲಿ ಕೊಂಡ ಹಾಯುವುದು ಅಂದರೆ ದೇವರಿಗೆ ಹರಿಕೆ ರೂಪದಲ್ಲಿ ಕೆಂಡದ ಮೇಲೆ ನಡೆಯುವ ಧಾರ್ಮಿಕ ಆಚರಣೆ ರಾಜ್ಯದ ಹಲವಾರು ಗ್ರಾಮಗಳಲ್ಲಿ ನಡೆಯುವುದು. ಅಗ್ನಿಕೊಂಡ ಹಾಯುವ ಪೂಜಾರಿಯ ಮುಖದ ತುಂಬಾ ಭಂಡಾರ ಕುಂಕುಮ ಹಚ್ಚಿಕೊಂಡಿರುತ್ತಾನೆ. ಇದನ್ನು ಹಚ್ಚಿದಾಗ ಕೆಂಡ ತುಳಿಯುವ ಆ ಪೂಜಾರಿಗಳು ದೇವಿಯ ಪ್ರತಿರೂಪವಾಗಿ ಕಾಣಬೇಕೆಂಬ ಆಶಯವಾಗಿದೆ"[೨೬] ಎಂದು ಕೃಷ್ಣವೇಣಿಯವರು ತಿಳಿಸಿದ್ದಾರೆ.

ಇನ್ನೂ ಭಂಡಾರ ಸಮ್ಮುಖದಲ್ಲಿ ನಡೆಯುವ ದೇವದಾಸಿ ಅಥವಾ ಬಸವ ಪದ್ಧತಿಯನ್ನು ಕಾಣಬಹುದಾಗಿದೆ. ಬಸವ ಪದ್ಧತಿಯಲ್ಲಿ ಗ್ರಾಮದಲ್ಲಿ ನಡೆಯುವ ಪದ್ಧತಿಯಾಗಿದೆ. "ಬಸವಿಗೆ ಗ್ರಾಮದಲ್ಲಿ ಮುತ್ತು ಕಟ್ಟಿಸುವ ಗ್ರಾಮದ ಸಮ್ಮುಖದಲ್ಲಿ ದೇವರ ಹೆಸರೇ ಆ ಹುಡುಗಿಗೆ ಭಂಡಾರ ಹಚ್ಚಿ ಎಲ್ಲರಿಗೂ ಕೇಳುವಂತೆ ಕೂಗಿ ಪೂಜೆ ಮಾಡಿಸಿ ಬಸವಿಯನ್ನಾಗಿ ಬಿಟ್ಟು ಬರುತ್ತಾರೆ"[೨೭] ಎಂದು ತಳವಾರ ವಾಮದೇವರು ತಿಳಿಸಿದ್ದಾರೆ.

ಹರಪನಹಳ್ಳಿ ತಾಲ್ಲೂಕಿನ ಉಚ್ಚಂಗೆಮ್ಮ ದೇವಿಯ ಜಾತ್ರೆಯಲ್ಲಿ ಓಕುಳಿ ಆಡುವ ಆಚರಣೆಯನ್ನು ನಡೆಸುತ್ತಾರೆ. ಇಲ್ಲಿ ಅರಿಶಿಣದ ಓಕಳಿ ಕುಂಕುಮದ ಓಕಳಿ ನಡೆಯುತ್ತದೆ ಎಂದು ತಿಳಿಯಬಹುದಾಗಿದೆ.[೨೮] ಬೆಳ್ಳಿ ಅಂತ್ರದಲ್ಲಿಯೂ ಸಹ ಭಂಡಾರವನ್ನು ತುಂಬಿ ಜಿಗುಟನ್ನು ತುರುಕಿ ಒಂದು ಬಿಳಿ ಹಾಳೆಯಲ್ಲಿ ದೇವಿಯ ಹೆಸರು ಮಂತ್ರ ಬರೆದು ಕಟ್ಟುವ ಪದ್ಧತಿಯನ್ನು ಕಾಣಬಹುದಾಗಿದೆ.[೨೯] ಈ ರೀತಿಯಾಗಿ ಭಂಡಾರವು ಮಹತ್ವದ ಪಾತ್ರವಹಿಸುತ್ತದೆ.

ಹುಲಿಗೆಮ್ಮನ ಅರ್ಚಕರು ಭಂಡಾರವನ್ನು ಜ್ಞಾನೇಂದ್ರಿಯ ಸಂಕೇತವೆಂದು ಹೇಳಿದ್ದಾರೆ. ಹಣೆಯ ಮಧ್ಯಭಾಗದಲ್ಲಿ ಲಕ್ಷ್ಮೀಪುರಸ್ಥವಾಗಿರುತ್ತಾಳೆಂಬ ಪ್ರತೀತಿಯಿದೆ. ಅಲ್ಲಿ ಭಂಡಾರ ಹಚ್ಚುವುದರಿಂದ ಜ್ಞಾನೇಂದ್ರಿಯವನ್ನು ಹಿಡಿತದಲ್ಲಿ ಇಡುತ್ತದೆಂದು ಇದರಿಂದ ಭಂಡಾರ ಪ್ರಾಧಾನ್ಯತೆಯನ್ನು ಪಡೆದಿದೆ ಎಂದು ಹೇಳಿದ್ದಾರೆ. ಅಲ್ಲದೇ ಹುಲಿಗೆಮ್ಮನಿಗೆ ಸ್ತ್ರೀಯರು ಮುತ್ತೈದೆತನ ಸಿಗಲೆಂದು ಭಂಡಾರವನ್ನು ದೇವಿಗೆ ಅರ್ಪಿಸುತ್ತಾರೆ. ಭಂಡಾರದಿಂದ ಬಂಧುತ್ವ ರಕ್ತಸಂಬಂಧ ವಂಶವೃದ್ಧಿಗೆ ಭಂಡಾರ ಪ್ರಧಾನವಾಗಿದೆಂದು ಅರ್ಚಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅಲ್ಲದೇ ಹೆಣ್ಣು ದೇವರಿಗೆ ಭಂಡಾರ ಕುಂಕುಮ ಕೆಂಪು ಹೂ ಪ್ರಾಧಾನ್ಯತೆಯನ್ನು ಪಡೆದಿದೆ ಎಂದು ತಿಳಿಸಿದ್ದಾರೆ. ಒಟ್ಟಾರೆ ಭಂಡಾರ ದೇವತೆಗಳನ್ನು ಕರ್ನಾಟಕದಲ್ಲಿ ಅತಿ ಹೆಚ್ಚಾಗಿ ಕಾಣಬಹುದಾಗಿದೆ. ಈ ದೇವತೆಗಳಿಗೆ ಭಂಡಾರ(ಅರಿಶಿಣ) ಮುತ್ತೈದೆಯರ ಸಂಕೇತವನ್ನು ವ್ಯಕ್ತಪಡಿಸುವಂತಹ ಈ ದೇವತೆಗಳು ಮುತ್ತೈದೆಯರ ಸಂಕೇತಕ್ಕೆ ಪ್ರತೀಕವಾಗಿದ್ದಾರೆ.

**ಬೀರಪ್ಪ ಸಂಪ್ರದಾಯ :**

ವೀರಪರಂಪರೆಗೆ ಸೇರಿದ ಬೀರದೇವರು ಹಾಲುಮತ ಸಮುದಾಯದ ಸಾಂಸ್ಕೃತಿಕ ನಾಯಕನಾಗಿದ್ದಾರೆ. ಕುರುಬರ ಆರಾಧ್ಯ ದೈವ ಬೀರಪ್ಪನಾಗಿದ್ದಾನೆ. ಬೀರಪ್ಪನ ಪ್ರಭಾವ-ಪ್ರೇರಣೆ ಈ ಜನಾಂಗದ ಮೇಲೆ ಆಗಿದೆ. ಬೀರಪ್ಪನನು 'ಬೆಂಕಿ ಬೀರಪ್ಪ'ನೆಂಬ ಹೆಸರಿನಿಂದ ಕರೆಯುತ್ತಾರೆ. ಬೀರೂರಿನ ಬೀರಪ್ಪನನ್ನು 'ಹುಲಿಬೆಂಕಿ ಬೀರಲಿಂಗೇಶ್ವರ' ಎಂದು ಕರೆಯುತ್ತಾರೆ. ಬೀರಪ್ಪನ ಒಕ್ಕಲುಗಳಲ್ಲಿ ಬೀರಪ್ಪನ ಭಂಡಾರವೆಂದರೆ ಅತಿಯಾದ ಭಕ್ತಿ, ಬೀರಪ್ಪನಷ್ಟೇ ಶಕ್ತಿಶಾಲಿ ಅವನ ಭಂಡಾರ ಎಂಬುದು ಭಕ್ತರ ನಂಬಿಕೆಯಾಗಿದೆ. ಬೀರಪ್ಪನ ಜಾತ್ರೆ, ಉತ್ಸವಗಳಲ್ಲಿ ಭಂಡಾರ ಪೂಜೆಯನ್ನು ಕಾಣಬಹುದಾಗಿದೆ.

ಭಂಡಾರವನ್ನು ಧರಿಸಿದ ಮೇಲೆ ಸತ್ಯವನ್ನು ಮಾತ್ರ ನುಡಿಯಬೇಕು. ಸುಳ್ಳು ಹೇಳಿದರೆ ಬೀರಪ್ಪ ಶಿಕ್ಷಿಸದೇ ಬಿಡುವುದಿಲ್ಲ ಎಂಬುದು ಹಾಲುಮತದವರಲ್ಲಿದೆ. ಇತರೆ ಜನಸಾಮಾನ್ಯರ ಭಯ-ಭಕ್ತಿ, ನಂಬಿಕೆಯಾಗಿದೆ. 'ಭಂಡಾರವೆಂದರೆ ಬೀರಪ್ಪ-ಬೀರಪ್ಪನೆಂದರೆ ಭಂಡಾರ' ಎಂಬರ್ಥವನ್ನು ಧಾರ್ಮಿಕವಾಗಿ ಪ್ರಚಲಿತ ಮಾತಾಗಿದೆ.

**ಭಂಡಾರ ಸಿದ್ಧತೆ :**

ಮೈಲಾರಲಿಂಗನ ಭಂಡಾರ ಸಿದ್ಧತೆಯಂತೆ ಬೀರಪ್ಪನ ಸಂಪ್ರದಾಯದಲ್ಲೂ ಸಹ ಭಂಡಾರ ಸಿದ್ಧತೆಯನ್ನು ಕಾಣಬಹುದಾಗಿದೆ. ಭಕ್ತಿಶಾಲಿ ಮತ್ತು ಶಕ್ತಿಶಾಲಿ ಭಂಡಾರವನ್ನು ಜಾತ್ರಾಮಹೋತ್ಸವದ ಆಹ್ವಾನ ಮತ್ತು ಮುನ್ಸೂಚನೆಯ ಸಂಕೇತವಾಗಿ ಒಕ್ಕಲು ಭಕ್ತರ ಮನೆಗಳಿಗೆ ಕಳಿಸಲಾಗುತ್ತದೆ. ಈ ಪವಿತ್ರ ಭಂಡಾರವನ್ನು ತಯಾರಿಸುವ ರೀತಿಯು ವಿಶಿಷ್ಟವಾದದ್ದು. "ಭಂಡಾರ ತಯಾರಿಕೆಗೆ ಬೇಕಾಗುವ ಅರಿಶಿಣದ ಕೊಂಬುಗಳನ್ನು ತಂದು ಬೀರೇಶ್ವರ ಅಥವಾ ಸೋಮೇಶ್ವರ ದೇವಸ್ಥಾನದಲ್ಲಿ ಅದನ್ನು ನುಣ್ಣಗಾಗುವಂತೆ ಪುಡಿಮಾಡಿ ದೇವರ ಮುಂದಿಟ್ಟು ಪೂಜೆ ಮಾಡುತ್ತಾರೆ. ನಂತರ ಅದನ್ನು ಚಿಕ್ಕ ಚಿಕ್ಕ ಪೊಟ್ಟಣಗಳಲ್ಲಿ ಕಟ್ಟಿ ಒಕ್ಕಲುಭಕ್ತರ ಮನೆಗಳಿಗೆ ತೆಗೆದುಕೊಂಡು ಹೋಗುತ್ತಾರೆ. ಬೀರಪ್ಪನ ಜಾತ್ರೆಯಲ್ಲಿ ಭಂಡಾರ ಚೀಟಿ ಕಳುಹಿಸಿದರೆ, ಒಕ್ಕಲುಗಳು ಮೀಸಲು ಕಾಣಿಕೆಯನ್ನು ಜಾತ್ರೆಗೆ ತಂದು ದೇವರಿಗೆ ಒಪ್ಪಿಸಬೇಕು ಎಂಬ ಸಂದೇಶ ಇರುತ್ತದೆ. ಖಂಡುಗಡಹಳ್ಳಿ ಸೋಮಭೀರಪ್ಪನ ಜಾತ್ರೆಯಲ್ಲಿ ಭಿಂಗಯ್ಯನವರು ಅದನ್ನು ತೆಗೆದುಕೊಂಡು ಒಕ್ಕಲು ಮನೆಗಳಿಗೆ ತಲುಪಿಸುತ್ತಾರೆ. ಇಲ್ಲಿ ಗಮನಿಸಬೇಕಾದ ಸಂಗತಿಯೆಂದರೆ ಭಂಡಾರ ಚೀಟಿಯನ್ನು 'ಗುರು' ಸ್ಥಾನದಲ್ಲಿರುವ ಭಿಂಗಯ್ಯನವರು ಜಾತ್ರೆಗೆ ನಿಶ್ಚಿತ ಅವಧಿಯ ಮೊದಲು ತೆಗೆದುಕೊಂಡು ಭಕ್ತರ ಮನೆಗಳಿಗೆ ಹೋಗುವುದು ಇದನ್ನು ಸೋಮೇಶ್ವರ ಸ್ವಾಮಿಯ ಜಾತ್ರೆಯ ಆದೇಶವೆಂಬಂತೆ ಪರಿಗಣಿಸಲಾಗುತ್ತದೆ"[೩೦] ಎಂದು ಲಿಂಗದಹಳ್ಳಿ ಹಾಲಪ್ಪ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಹೀಗೆ ಭಕ್ತರ ಮನೆಗೆ ತೆಗೆದುಕೊಂಡು ಹೋದ ಚೀಟಿಯನ್ನು ದೇವರ ಜಗುಲಿಯ ಮೇಲಿಟ್ಟು ಪೂಜೆ ಮಾಡಿ ಬಂದರೆ, ಆ ಭಕ್ತ ಕುಟುಂಬವು ಅಂದಿನಿಂದ ಜಾತ್ರೆ ಮುಗಿಯುವತನಕ ಮಾಂಸಾಹಾರವನ್ನು ವರ್ಜಿಸುತ್ತದೆ. ಇದು ಅಘೋಷಿತ ಪ್ರತಿಬಂಧನೆಯಾಗಿದೆ ಎಂದು ತಿಳಿಯಬಹುದಾಗಿದೆ.

"ಉತ್ತರ ಕರ್ನಾಟಕದಲ್ಲಿ ಬೀರಪ್ಪನ ಭಕ್ತರು ಡೊಳ್ಳಿನ ಮೇಳದವರಿಗೆ ಹಾಲುಗ್ಗಿ ಊಟಕ್ಕೆ ಬಡಿಸಿದನಂತರ ಅವರು ಹೊರಟು ಹೋಗುವಾಗ ಗೌರವಾರ್ಥವಾಗಿ ಖರ್ಚು, ಎಲೆ, ಅಡಿಕೆ, ಭಂಡಾರವನ್ನು ನೀಡುವ ಸಂಪ್ರದಾಯವಿದೆ"[೩೧] ಎಂದು ಲಿಂಗದಹಳ್ಳಿ ಹಾಲಪ್ಪನವರು ಹೇಳುತ್ತಾರೆ.

ಬೀರದೇವರ ತೋಪುಜಾತ್ರೆಯನ್ನು "ಮಧ್ಯಕರ್ನಾಟಕದ ಚಿತ್ರದುರ್ಗ, ಚಿಕ್ಕಮಗಳೂರು, ಹಾವೇರಿ, ಶಿವಮೊಗ್ಗ, ದಾವಣಗೆರೆ ಜಿಲ್ಲೆಗಳ ಪ್ರದೇಶಗಳಲ್ಲಿ ಪ್ರಮುಖವಾಗಿ ಕುರುಬರ ನೆಲೆಗಳಲ್ಲಿ ಹನ್ನೆರಡು ವರ್ಷಗಳಿಗೊಮ್ಮೆ ಆಚರಿಸುವ ಬೀರದೇವರ ಜಾತ್ರೆಯಾಗಿದೆ. ಜಾತ್ರೆಯ ಪೂರ್ವಭಾವಿ ಸಿದ್ಧತೆಗಾಗಿ ದೈವದ ಅಪ್ಪಣೆ, ಸಮಿತಿಗಳ ರಚನೆ ಬೆಂಕಿ ಬೀರಪ್ಪನ ಭಂಡಾರ ಚೀಟಿ ಮೊದಲಾದ ಸಿದ್ಧತೆಗಳು

ನಡೆಯುತ್ತವೆ"[೩೨] ೧೨ ತಿಂಗಳ ಪೂಜೆ ಮೊದಲಾದ ಅನೇಕ ಧಾರ್ಮಿಕ ಕಾರ್ಯಕ್ರಮಗಳು ವಿಧಿವಿಧಾನವಾಗಿ ಜರುಗುತ್ತವೆ. ತೋಪುಜಾತ್ರೆಯ ಧಾರ್ಮಿಕ ಆಚರಣೆಯ ಸಾಂಸ್ಕೃತಿಕ ವಿಶಿಷ್ಟತೆಯನ್ನು ಪಡೆದಿದೆ. ಒಂದು ಬೀರದೇವರ ಗುಡಿಕಟ್ಟಿಗೆ ಒಬ್ಬ ಈರಗಾರನಿರುವುದು ಕಂಡುಬರುತ್ತದೆ. ಈರಗಾರನು ಪ್ರಾಚೀನ ಸಂಪ್ರದಾಯದ ಸಂಪೂರ್ಣ ಭಂಡಾರ ಸಂಸ್ಕೃತಿಗೆ ಸೇರಿದವನಾಗಿದ್ದಾನೆ. ಈ ಪ್ರಾಚೀನಪೂರ್ವ ಸಂಪ್ರದಾಯುದ ಈರಗಾರನ ವೇಷವು ವಿಶಿಷ್ಟವಾದವೂ, ವೀರಗಾಂಭೀರ್ಯದಿಂದಲೂ ಕೂಡಿರುತ್ತದೆ. ಇಂತಹ "ಈರಗಾರನು ಡೊಳ್ಳು ನಿರ್ಮಿಸಿದ ವೃತ್ತದ ಮಧ್ಯದಲ್ಲಿ ನಿಂತು ಬೀರಪ್ಪನ ಪಲ್ಲಕ್ಕಿಯ ಎತ್ತರಕ್ಕೆ ಹಾರಿ ಕೈಯಲ್ಲಿ ಹರಿತವಾದ ಆಯುಧದಿಂದ ಹೊಕ್ಕುಳಿನ ಭಾಗಕ್ಕೆ ಹೊಡೆದುಕೊಂಡು ಈರಿಕೆ ಮಾಡುತ್ತಾನೆ. ತಕ್ಷಣ ಆ ಭಾಗಕ್ಕೆ ಭಂಡಾರವನ್ನು ಪ್ರೋಕ್ಷಿಸಲಾಗುತ್ತದೆ. ಇದೇ ರೀತಿ ನಾಲ್ಕೂದಿಕ್ಕಿಗೆ ತಿರುಗಿ ಎತ್ತರಕ್ಕೆ ಹಾರಿ, ಈರಿಕೆ ಮಾಡಿಕೊಂಡಾಗಲೂ ಭಂಡಾರವನ್ನು ಪ್ರೋಕ್ಷಿಸಲಾಗುತ್ತದೆ ಎಲ್ಲಿ ಡೊಳ್ಳುಗಳಿಗೆ ಬಂಡಾರವನ್ನು ಉಗ್ಗುತ್ತಾ ಇದ್ದರೆ ಇಡೀ ವಾತಾವರಣವು ಸುವರ್ಣಮಯವಾಗಿ ಕಂಡುಬರುತ್ತದೆ"[೩೩] ಎಂದು ಲಿಂಗದಹಳ್ಳಿ ಹಾಲಪ್ಪನವರು ಹೇಳುತ್ತಾರೆ.

ಈರಗಾರರಿಲ್ಲದೆ ಬೀರಪ್ಪ ಮತ್ತು ಅವನ ಜೀವಂತ ರೂಪವಾದ ದಳವಾಯಿಗಳನ್ನು ಧಾರ್ಮಿಕ ಕಾರ್ಯಕ್ರಮಗಳಿಗೆ ಹಾಗೂ ಇನ್ನುಳಿದ ಯಾವುದೇ ಕಾರ್ಯಕ್ಕಾಗಲಿ ಹೊರಡಿಸುವುದಿಲ್ಲ. ಒಟ್ಟಾರೆಯಾಗಿ ಬೀರಪ್ಪನ ಭಂಡಾರ ಸಂಪ್ರದಾಯವನ್ನು ಉತ್ಸವ–ಜಾತ್ರೆಗಳಲ್ಲಿ ಭಕ್ತಿ ನಿಷ್ಠೆಯಿಂದ ನೆರವೇರಿಸುವುದರ ಮೂಲಕ ಕುರುಬ ಜನಾಂಗದವರು ತಮ್ಮ ಭಕ್ತಿ, ಶ್ರದ್ಧೆ, ಭಾವನೆಯನ್ನು ತೋರುತ್ತಾರೆ.

**ಅಮೋಘ ಸಿದ್ಧನ ಸಂಪ್ರದಾಯ :**

ಹಾಲುಮತ ಸಂಸ್ಕೃತಿಯ ಎರಡನೆಯ ಧಾರ್ಮಿಕ ಸಂಪ್ರದಾಯವೇ ಅಮೋಘಸಿದ್ಧನ ಸಂಪ್ರದಾಯವಾಗಿದೆ. ಕರ್ನಾಟಕ ಹಾಗೂ ಮಹಾರಾಷ್ಟ್ರದ ಗಡಿಭಾಗದಲ್ಲಿ ನೆಲೆಗೊಂಡು ಜನಮಾನಸದಿಂದ ಪೂಜೆಗೊಳ್ಳುವ ಆರಾಧ್ಯದೈವ ಅಮೋಘಸಿದ್ಧ. ವಿಜಯಪುರ ತಾಲೂಕಿನ ಅರಕೇರಿಯಲ್ಲಿ ಅಮೋಘಸಿದ್ಧನ ಸಂಪ್ರದಾಯ ಬೆಳೆದು ಬಂದಿದೆ. "ಅಮೋಘಸಿದ್ಧ ಪರಂಪರೆಯ ಕುರುಬರ ಒಡೆಯರಾಗಿದ್ದಾರೆ. ಇವರು ಕಂಬಳಿಜಾಡಿ, ಭಂಡಾರ ಚೀಲ, ನಾಗರಬೆತ್ತ ಧರಿಸಿ ಹಣೆ ಮೇಲೆ ಬಂಡಾರಧಾರಣೆ ಮಾಡಿರುತ್ತಾರೆ. ಭಂಡಾರವು ಇವರಿಗೆ ಅತ್ಯಂತ ಮಹತ್ವ ಮತ್ತು ಪವಿತ್ರ ವಸ್ತುವಾಗಿದೆ"[೩೪] ಎಂದು ಲಿಂಗದಹಳ್ಳಿ ಹಾಲಪ್ಪನವರು ತಿಳಿಸಿದ್ದಾರೆ.

ಅಮೋಘ ಸಂಪ್ರದಾಯ ಸಂಪೂರ್ಣ ಬಂಡಾರದ ಸಂಸ್ಕೃತಿಯನ್ನು ಉಳಿಸಿಕೊಂಡುಬಂದಿದೆ. "ತರಪವಾಡದಂಥಹ ಕಥನವನ್ನು ಅಮೋಘ ಒಡೆಯರ ಪಂಗಡದವರೂ ರೂಪಿಸಿಕೊಂಡಿದ್ದಾರೆ.

ಈ ಕಥನದ ಉದ್ದಕ್ಕೂ ಭಂಡಾರದ ಪಾರಮ್ಯವನ್ನು ಪ್ರಕಟಿಸಲಾಗಿದೆ. ಅಮೋಘಸಿದ್ದನ ವರವಿನ ಮಗನಾದ ಬಾಲಕ ಬಿಳಿಯಾಸಿದ್ದ. ಈ ಪವಾಡದಲ್ಲಿ ಮೇರೆಯುತ್ತಾನೆ"[೩೫] ಎಂದು ಚನ್ನಪ್ಪ ಕಟ್ಟಿ ಅವರು 'ಅರಿಕೇರಿ'ಯಲ್ಲಿ ವಿವರಿಸಿದ್ದಾರೆ.

ಅಮೋಗಿ ಒಡೆಯರ ಸಂಪ್ರದಾಯ ಭಂಡಾರ ಸಂಸ್ಕೃತಿಯನ್ನು ನೋಡುವುದಾದರೆ "ಪ್ರತಿ ಛಟ್ಟಿ ಅಮವಾಸ್ಯೆಯ ದಿನದಂದು ಜಾತ್ರೆ ನೆರವೇರುತ್ತದೆ. ಈ ಸಂಪ್ರದಾಯದ ಎಲ್ಲ ಸಮುದಾಯದವರಿಗೆ ಅರಕೇರಿ ಯಾತ್ರ ಸ್ಥಳವಾಗಿದೆ. ಸುಮಾರು ೨೦೦ ಪಲ್ಲಕ್ಕಿಗಳು ಅಮೋಘಸಿದ್ದನ ಜಾತ್ರೆಯ ದಿನದಂದು ಅರಿಕೇರಿಗೆ ಆಗಮಿಸುತ್ತವೆ. ಅಂದು ಪಲ್ಲಕ್ಕಿಯಲ್ಲಿರುವ ದೇವರುಗಳ 'ಮಹಾಮಿಲನ' ನೆರವೇರುತ್ತದೆ. ಭಂಡಾರದ ಧೂಳ ಆಕಾಶದೆತ್ತರಕ್ಕೆ ಹಾರಿ ಅಲ್ಲಿಯ ಪರಿಸರವೆಲ್ಲವೂ ಜಾತ್ರೆಗೆ ಆಗಮಿಸಿದ ಎಲ್ಲ ಜನರೂ ಭಂಡಾರಮಯವಾಗಿರುತ್ತಾರೆ"[೩೬] ಪಲ್ಲಕ್ಕಿಗಳ ಮಿಲನದ ಸಡಗರ ಹಾಗೂ ಅಗಲುವಿಕೆಯ ವಿರಹ ನೋಡಲು ಎರಡು ಕಣ್ಣು ಸಾಲದು ಎಂದು ಎಂ.ಎಂ.ಪಡಶೆಟ್ಟಿಯವರು ಧಾರ್ಮಿಕ ವಿಷಯಗಳು ಎಂಬ ಕೃತಿಯಲ್ಲಿ ತಿಳಿಸಿದ್ದಾರೆ. ಹಾಲುಮತ ಸಮುದಾಯದ ಒಡೆಯರ ಜಾತ್ರೆಗಳ ಮುಖಾಂತರ ಭಂಡಾರ ಸಂಸ್ಕೃತಿಯಲ್ಲಿ ದೇಶಿ ಸಂಸ್ಕೃತಿಯನ್ನು ಉಳಿಸಿಕೊಂಡು ಬರುತ್ತಿರುವುದನ್ನು ಕಾಣಬಹುದಾಗಿದೆ.

ಅಮೋಘಸಿದ್ದನನ್ನು ಹಾಡಿನೊಂದಿಗೆ ಜನಪದರು ವರ್ಣಿಸಿರುವುದನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

"ಶಿವನೆ ಸೋಮಯ್ಯನ ಶಿಸುಮಗ ಹರಣದ ಕೆರೆ ನಮ್ಮೊಡಿಯಾನೆ
ಹೂವಿನನೊಳಗವ ಹುದುಗ್ಯಾನೆ ಮಾಲ್ಯೊಳಗ ಮಾರಿ ತೋರ್‍ಯಾನೆ
ಮಾಲ್ಯೊಳಗೆ ಮಾರಿ ತೋರ್‍ಯಾನ ದೇವರ ಭಂಡಾರದೊಳಗವ ಬೆವತಾನೆ"

ಅಮೋಘಸಿದ್ದನು ಮಳೆ ಕೀಲು, ಬೆಳೆಕೀಲು, ಹೋಮದ ಕಂಬಳಿ, ನೇಮದ ಬೆತ್ತ, ಹುಟ್ಟು ಬಂಜೆಯರಿಗೆ ತೊಟ್ಟಿಲು ಭಾಗ್ಯದ ಜೊತೆ ಜೊತೆಗೆ ಭಂಡಾರ ಭರಣಿಯನ್ನೂ ಕೈಲಾಸದಿಂದ ಬರುವಾಗ ಶಿವನಿಂದ ಆಶೀರ್ವಾದ ರೂಪದಲ್ಲಿ ಪಡೆದನೆಂದು ಅವನ ಕುರಿತ ಪುರಾಣ ಕಥನಗಳು ಹೇಳುತ್ತವೆ. ಅಲ್ಲದೇ ಅವನು ಪಡೆದ ವಸ್ತುಗಳಲ್ಲಿ ಭಂಡಾರದ ಭರಣಿಯೂ ಒಂದು"[೩೭] ಎನ್ನುವುದೂ ಇಲ್ಲಿ ಸ್ಮರಿಸಿಕೊಳ್ಳಬಹುದೆಂದು ಚನ್ನಪ್ಪ ಕಟ್ಟಿ ಅವರು ಹೇಳಿದ್ದಾರೆ.

ಅಮೋಘಸಿದ್ಧನ ಪಲ್ಲಕ್ಕಿಗಳ ಮಿಲನದ ಸಂದರ್ಭದಲ್ಲಿ ಲಕ್ಷಾಂತರ ಭಕ್ತರು ಪಲ್ಲಕ್ಕಿಗಳ ಮೇಲೆ ಭಂಡಾರವನ್ನು ತೂರಾಡುವುದು ಒಂದು ವಿಶೇಷವಾಗಿದೆ. ತೂರಾಡಿದ ಭಂಡಾರವು ನೆಲಮುಗಿಲುಗಳನ್ನು ಆವರಿಸಿ, ಪ್ರಕೃತಿಯು ಹಳದಿ ವರ್ಣವನ್ನು ಹೊತ್ತು ನಿಂತಿರುತ್ತದೆ ಎಂದು ತಿಳಿಯಬಹುದಾಗಿದೆ.

“ಅಮೋಘಸಿದ್ದನ ಸಂಪ್ರದಾಯದ ಹಲವು ಆಚರಣೆಗಳಲ್ಲಿ ಭಂಡಾರದ ಹರಕೆ ಮುಖ್ಯವಾಗಿದೆ. ಭಕ್ತರು ತಮ್ಮ ಸಂಕಲ್ಪ ಈಡೇರಿದರೆ ಭಂಡಾರ ಪೂಜೆ ಮಾಡಿಸುವುದಾಗಿ ಹರಕೆ ಮಾಡಿಕೊಳ್ಳುವರು ಭಕ್ತರು ಎಣ್ಣೆ ಮತ್ತು ಭಂಡಾರವನ್ನು ತಂದುಕೊಡುವರು. ದೇವರಿಗೆ ಎಣ್ಣೆಯಿಂದ ಮಜ್ಜನ ಮಾಡಿಸಿದ ನಂತರ ಭಂಡಾರವ ಲೇಪಿಸುತ್ತಾರೆ. ಎಣ್ಣೆಯ ಜೊತೆಗೆ ಭಂಡಾರ ಸಮನಾಗಿ ಬೆರೆತು ದೇವರು ಬಂಗಾರ ವರ್ಣನಾಗಿ ಹೊಳೆಯುತ್ತಾನೆ. ಹೆಚ್ಚಿನ ಎಣ್ಣೆಯ ಪ್ರಮಾಣದಿಂದ ಭಂಡಾರ ಹಸಿಹಸಿಯಾಗಿದ್ದರೆ ಅದನ್ನು ನೋಡಿದ ಭಕ್ತರು ತಮ್ಮ ದೇವರು ಭಂಡಾರದಲ್ಲಿ ಬೆವೆತಿದ್ದಾನೆ ಎಂದು ಭಾವಿಸುತ್ತಾರೆ. ಈ ಭಂಡಾರವನ್ನು ಇಳಿಸುವ ಆಚರಣೆಯು ಇರುತ್ತದೆ. ಹೀಗೆ ಇಳುವಿದ ಭಂಡಾರವನ್ನು ಸಂಗ್ರಹಿಸಿ ಇಟ್ಟುಕೊಂಡು ಒಡೆಯರು ಗುಡಿಗೆ ಬಂದ ಭಕ್ತರಿಗೆ ಹಚ್ಚುತ್ತಾರೆ”[೩೮] ಒಟ್ಟಾರೆ, ಅಮೋಘಸಿದ್ದನ ಸಂಪ್ರದಾಯ-ಆಚರಣೆಗಳಲ್ಲಿ ಭಂಡಾರ ಬಹು ಪ್ರಾಮುಖ್ಯತೆಯನ್ನು ಪಡೆದಿದೆ. ಒಡೆಯರ ಸಂಪ್ರದಾಯದಲ್ಲಿ ಅಮೋಘಸಿದ್ದನ ಸಂಪ್ರದಾಯವು ಸಂಪೂರ್ಣವಾಗಿ ಇಂದಿಗೂ ತನ್ನ ಜಾತ್ರೆ ಉತ್ಸವಗಳಲ್ಲಿ ಭಂಡಾರ ಸಂಸ್ಕೃತಿಯನ್ನು ಉಳಿಸಿ-ಬೆಳೆಸಿಕೊಂಡು ಬಂದಿದೆ ಎಂಬುದು ತುಂಬಾ ಗಮನಾರ್ಹವಾದ ವಿಷಯವಾಗಿದೆ. ಜಾತ್ರೆ-ಉತ್ಸವಗಳು ಅಮೋಘಸಿದ್ಧನ ಪರಂಪರೆಯ ದೈವವು ನಂಬಿದ ಭಕ್ತರನ್ನು ತನ್ನ ತೆಕ್ಕೆಯೊಳಗೆ ಹಿಡಿದು ರಕ್ಷಿಸುವನೆಂದು ಭರವಸೆ ಕೊಡುವ ಆಚರಣೆಗಳನ್ನು ಕಾಣಬಹುದಾಗಿದೆ. ಕುರುಬರ ಧಾರ್ಮಿಕ ಲಾಂಛನವಾದ ಭಂಡಾರ ಮತ್ತು ಅದರ ಉನ್ನತಿಯನ್ನು ಕಾಪಾಡಿಕೊಂಡು ಬಂದಿರುವುದು ಈ ಅಮೋಘಸಿದ್ಧನ ಪರಂಪರೆಯಾಗಿದೆ ಎಂಬುದು ಒಂದು ವಿಶೇಷವಾದ ಸಂಗತಿಯಾಗಿದೆ. ಭಂಡಾರ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿರುವುದು ಅಮೋಘಸಿದ್ದನ ಜಾತ್ರೆಯ ಮೂಲಕ ಹೊರಹೊಮ್ಮುವುದನ್ನು ಕಾಣಬಹುದಾಗಿದೆ.

**ಭಂಡಾರ ಮತ್ತು ವಿಭೂತಿ ಸಂಸ್ಕೃತಿ :**

ಕರ್ನಾಟಕದ ಸಂದರ್ಭದಲ್ಲಿ ‘ಹಾಲುಮತವೆಂದರೆ ‘ಕುರುಬ’ ಜನಾಂಗವೆಂದು ಪರಿಗಣಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಹಟ್ಟಿಕಾರರು ಅಥವಾ ಪಟ್ಟಿಕಾರರು ಎಂದು ಈ ಜನಾಂಗವನ್ನು ಕರೆಯಲಾಗುತ್ತಿತ್ತು. ಈ ಜನಾಂಗಕ್ಕೆ ತನ್ನದೇ ಆದ ಇತಿಹಾಸ ವೀರಪರಂಪರೆ ಧಾರ್ಮಿಕ ಪರಂಪರೆ ಗುರುಪರಂಪರೆ ವೃತ್ತಿ ಕುಶಲವೃತ್ತಿಗಳಿವೆ. ಹಾಲುಮತ ಸಂಸ್ಕೃತಿಯೆಂದರೆ ಕನ್ನಡ ನಾಡಿನ ಸಂಸ್ಕೃತಿಯೆಂದು ಶಂಬಾ ಜೋಶಿಯವರೂ ಹಾಲುಮತ ಸಂಸ್ಕೃತಿಯೆಂದರೆ ನೆಲಮೂಲ ಪಶುಪಾಲಕ(ಕುರುಬ ಯಾದವ) ಸಂಸ್ಕೃತಿಯೆಂದೂ ಇಂದಿಗೂ ಎಲ್ಲಾ ಜಾತಿ ಸಮುದಾಯ ಭಾಷಾ ಸಂಸ್ಕೃತಿಗಳು ಅದರ ನೆಲಗಟ್ಟಿನ ಮೇಲೆ ಬೆಳೆದಿವೆಯೆಂದು ಡಾ.ರಾ.ಚಿಂ.ಢೇರೆ ಅವರು ಪ್ರತಿಪಾದಿಸಿದ್ದಾರೆ.

ಹಾಲುಮತ ಸಮುದಾಯದ ಸಮಾಜವು ತನ್ನನ್ನು ಭಂಡಾರ ಸಂಸ್ಕೃತಿಗೆ ನಂತರ ವಿಭೂತಿ ಸಂಸ್ಕೃತಿಗೆ ಒಪ್ಪಿಸಿಕೊಂಡಿದೆ. ಪಶುಪಾಲಕರಾದ ಕುರುಬರು ಭಂಡಾರವನ್ನು ಹುಟ್ಟು ಹಾಕಿದವರು ಮೈಲಾರ, ಅಮೋಘಸಿದ್ದ, ಬೀರಪ್ಪ ಎಂದು ಅವರು ನಂಬಿದ್ದಾರೆ. ಹಾಗೇ ವಿಭೂತಿಯನ್ನು ಹುಟ್ಟುಹಾಕಿದವರು ರೇವಣಸಿದ್ಧರು ಎಂಬ ಆಗಾಧ ನಂಬಿಕೆ ಇವರದಾಗಿದೆ. ಭಂಡಾರವು ಪವಿತ್ರತೆಯ ಸಂಕೇತವಾಗಿ ಬಳಸಲಾಗುತ್ತದೆ. ವೈಜ್ಞಾನಿಕವಾಗಿ ಅರಿಷಿಣವು ರೋಗ ನಿವಾರಕ ಔಷಧಿಗುಣ ಹೊಂದಿದೆ. ಹಾಲು ಮತದವರು ಮೂಲತಃ ಹಣೆಗೆ ಹಚ್ಚುವುದು ಭಂಡಾರವನ್ನು ಆದರೆ ಕುರುಬರಿಗೆ ಗುರುಗಳನ್ನಿಡುವ ಒಡೆಯರು ವಿಭೂತಿ ಮತ್ತು ಲಿಂಗಧಾರಿಗಳಾಗಿದ್ದಾರೆ. ಒಡೆಯರ ಮೂಲಕ ವಿಭೂತಿ ಪ್ರವೇಶಿಸಿದೆ. ಆದರೆ ಕುರುಬರ ನಿತ್ಯಜೀವನದಲ್ಲಿ ಪೂಜಾ ಸಂದರ್ಭದಲ್ಲಿ ಕುರುಬರ ಮತ ಸಂಬಂಧಿಸಿದ ದೇವಾಲಯಗಳಲ್ಲಿ ಭಂಡಾರ ಬಳಕೆಯ ಸಂಪ್ರದಾಯವೇ ಇದೆ ಎಂದು ಕಾಣಬಹುದಾಗಿದೆ.

ರೇವಣಸಿದ್ಧ, ಸಿದ್ಧರಾಮ ಮತ್ತು ಅಮೋಘಸಿದ್ಧ ಈ ಮೂರು ಒಡೆಯರು ಭಂಡಾರ ಮತ್ತು ವಿಭೂತಿ ಸಂಸ್ಕೃತಿಯ ಉಗಮಕ್ಕೆ ಕಾರಣಕರ್ತರಾಗಿದ್ದಾರೆ. ಅಲ್ಲದೇ ಭಿಂಗಯ್ಯ, ಮಾಳಿಂಗರಾಯ ಮತ್ತು ದಾಸಕುರುಬರು ನಾಮದಾರಿ ಕುರುಬರು ಮುಂತಾದವರು ಭಂಡಾರ ಮತ್ತು ವಿಭೂತಿ ಸಂಸ್ಕೃತಿಯಲ್ಲಿ ಮಹತ್ವಪೂರ್ಣ ಪಾತ್ರವಹಿಸುತ್ತಾರೆ. ಇದು ಕರ್ನಾಟಕ ಕುರುಬರ ಪ್ರಧಾನ ಸಂಸ್ಕೃತಿಯಾಗಿದೆ. ಆಚರಣೆ ಮತ್ತು ಸಂಪ್ರದಾಯ ಭಂಡಾರ ಮತ್ತು ವಿಭೂತಿ ಸಂಸ್ಕೃತಿಯನ್ನು ನೋಡಬಹುದಾಗಿದೆ.

"ಬೀರದೇವರ ಉತ್ಸವ ಪಥದಲ್ಲಿ ಸಾವಿರದೋರು ಅಥವಾ ಸಮಾಜದವರು ಸಲ್ಲಿಸುವವರು ಇವರು ಸ್ನಾನ ಮಾಡಿ ಮಡಿಯುಟ್ಟು ಬಂದ ಇವರ ಹಣೆಗೆ ವಿಭೂತಿ ಭಂಡಾರಹಚ್ಚಿ ದೇವರ ಸೇವಕರೆಂದು ನೇಮಿಸಿ ಆಶೀರ್ವಾದ ಮಾಡುತ್ತಾರೆ. ಕುರುಬರ ಎಲ್ಲ ಕುಲದ ಭಕ್ತರು ಸಾವಿರದವರಾಗಿ ಬೀರದೇವರ ಸೇವೆ ಸಲ್ಲಿಸಲಾಗಿದೆ"[೩೯] ಎಂದು ತಿಳಿಯಬಹುದಾಗಿದೆ. ಅಲ್ಲದೆ. ಹಾಲುಮತಸ್ಥರಲ್ಲಿ "ಸಾವು ಸಂಭವಿಸಿದಾಗ ಒಡೆಯರನ್ನು ವಿಭೂತಿ, ಭಂಡಾರಹಚ್ಚಿ, ಒಡೆಯರನ್ನು ಆಮಂತ್ರಿಸುವರು, ಒಡೆಯರು ಶವವನ್ನು ಶಾಸ್ತ್ರೋಕ್ತವಾಗಿ ಪೂಜಿಸಿ ಕರ್ಮ ಕಳೆಯುವ ಆಚರಣೆ ಕಾಣಬಹುದಾಗಿದೆ"[೪೦] ಎಂದು ಲಿಂಗದಹಳ್ಳಿ ಹಾಲಪ್ಪ ಅವರು ಹೇಳಿದ್ದಾರೆ.

ಮಾಳಿಂಗರಾಯ ಮೊದಲು ಭಂಡಾರ ಸಂಸ್ಕೃತಿಯಾಗಿದ್ದು ನಂತರ ಕಾಲದಲ್ಲಿ ಭಂಡಾರದ ಜನಪ್ರಿಯತೆ ಕುಗ್ಗಿತು. "ಮಾಳಪ್ಪ ನಂತರ ಬಂದ ಪಶುಪಾಲಕ ಹಾಲುಮತದ ಸಾಂಸ್ಕೃತಿಕ ನಾಯಕರು 'ವಿಭೂತಿ' ಪಂಥಕ್ಕೆ ಸಂಸ್ಕೃತೀಕರಣವಾದದ್ದು ಹಿನ್ನಡೆಗೆ ಪ್ರದಾನ ಕಾರಣ. ಆದರೆ

ವಿಭೂತಿ ಪಂಥವನ್ನು ಪ್ರತಿಪಾದಿಸುವುದಕ್ಕೆ ಪ್ರಯತ್ನಪಟ್ಟ ಹಾಲುಮತದ ಸಾಂಸ್ಕೃತಿಕ ನಾಯಕರೆಲ್ಲರು ಇವತ್ತು ಇವೆರಡು ಪಂಥಗಳ ಸಂಕರಶೀಲ ಸಂಸ್ಕೃತಿಯ ನಾಯಕರಾಗಿ ರೂಪಿತವಾಗಿದ್ದಾರೆ. ವಿಭೂತಿ ಮತ್ತು ಭಂಡಾರಗಳೆರಡು ಇವರ ಆಚರಣೆಗಳಲ್ಲಿ ಜೀವಂತವಾಗಿವೆ. ಮಾಳಪ್ಪ ಆಚರಣೆಗಳಲ್ಲಿ ಈ ಪರಿಕಲ್ಪನೆ ಕಂಡುಬರುವುದಿಲ್ಲ"[೪೧] ಎಂದು ಚಂದ್ರಪ್ಪ ಸೊಬಟಿಯವರು ತಿಳಿಸಿದ್ದಾರೆ.

"ಮಧ್ಯ ಮತ್ತು ದಕ್ಷಿಣ ಕರ್ನಾಟಕದಲ್ಲಿ ಹಲವು ಶೈವ ದೇವಾಲಯಗಳಲ್ಲಿ ಜಾತ್ರೆ ಸಂದರ್ಭದಲ್ಲಿ ದೇವರಿಗೆ ಮೊದಲ ಎಡೆಯನ್ನು ಕುರುಬ ಜನಾಂಗದ ಮನೆತನಗಳು ಅರ್ಪಿಸುವ ಸಂಪ್ರದಾಯ ಉಳಿದುಕೊಂಡು ಬಂದಿದೆ. ರಥೋತ್ಸವದ ಸಂದರ್ಭದಲ್ಲಿ ದೇವರ ತೇರಿಗೆ ಮೊದಲಿಗರಾಗಿ ಕೈಹಚ್ಚಿ ಎಳೆಯುವ ಹಕ್ಕನ್ನು ಹೊಂದಿದ್ದಾರೆ. ಇದಲ್ಲದೆ ಪೂಜೆ, ಆರಾಧನೆ ಮತ್ತು ಮೀಸಲು ಅಳೆಯುವ ಸಂದರ್ಭದಲ್ಲಿ ಕುರುಬರು ಮೊದಲು(ಬೋಣಿ) ಮಾಡುವ ಸಂಪ್ರದಾಯ ಇಂದಿಗೂ ಶಿವಾಲಯಗಳಲ್ಲಿ ಕಂಡುಬರುತ್ತದೆ. ಮೈಲಾರನ ಸಂಪ್ರದಾಯದ ಚಟ್ಟಿ ಆಚರಣೆಯ ಭಂಡಾರ ತಯಾರಿಕೆಯು ಕುರುಬ ಜನಾಂಗದವರೇ ಸಿದ್ಧತೆ ಮಾಡುತ್ತಾರೆ. 'ಕುರುಬರದು ಹುಟ್ಟುಲಿಂಗ'. 'ಲಿಂಗಾಯಿತರದು ಕಟ್ಟುಲಿಂಗ' ಎಂಬ ಗಾದೆಯಂತೆ ಈ ಆಚರಣೆಯ ಕಾರಣಕರ್ತರು ಕುರುಬರು, ನಂತರದ್ದು ಕಟ್ಟು ಲಿಂಗಾಚರಣೆ ಅಂದರೆ ಲಿಂಗವಂತರದ್ದು, ಸ್ಥಾವರ ಶೈವಕ್ಷೇತ್ರಗಳು ಪೂರ್ವ ನೆಲೆಯಲ್ಲಿ ಕುರುಬ ಜನಾಂಗ ಭಂಡಾರ ಸಂಸ್ಕೃತಿಯ ಕ್ಷೇತ್ರಗಳಾಗಿದ್ದು ಗಮನಾರ್ಹವಾಗಿದೆ. ಹುಟ್ಟು ಶೈವರಾದ ಕುರುಬರು ಹಲವಾರು ಆಂತರಿಕ ಕಾರಣಗಳಿಗಾಗಿ ಕ್ಷೇತ್ರಗಳ ಪೂಜೆ ನಿರ್ವಹಣೆಯನ್ನು ಕಟ್ಟುಲಿಂಗದವರಾದ ವೀರಶೈವರಿಗೆ ಬಿಟ್ಟುಕೊಟ್ಟು ನೇಪಥ್ಯಕ್ಕೆ ಸರಿದಿರುವುದು ಸತ್ಯಸಂಗತಿ. 'ಭಂಡಾರ ಸಂಸ್ಕೃತಿಯಿಂದ' ವಿಭೂತಿ ಸಂಸ್ಕೃತಿಗೆ ಹೊರಳುವ 'ಸಿದ್ಧಪಂಥೀಯ'ರು 'ಶರಣಪಂಥೀಯ'ರಾಗುವ ಕಾಲಘಟ್ಟದ ಕೊಂಡಿಗಳಾಗಿ ದಳವಾಯಪ್ಪ ಮತ್ತು ಭಿಂಗಯ್ಯ ಮೊದಲಾದ ಪಟ್ಟದ ದೈವಗಳು ಕಾಣಿಸಿಕೊಳ್ಳುತ್ತಿದ್ದಾರೆ. ಇವರಿಬ್ಬರ ದೀಕ್ಷೆ ಪ್ರಕ್ರಿಯೆಯಲ್ಲಿಯೇ ಇದು ತಿಳಿದು ಬರುತ್ತದೆ[೪೨] ಎಂದು ಲಿಂಗದಹಳ್ಳಿ ಹಾಲಪ್ಪನವರು ತಿಳಿಸಿದ್ದಾರೆ.

ಬಹಳಷ್ಟು ಹಾಲುಮತಸ್ಥರು ಶರಣರ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿದ್ದಾರೆ "ಮೂಲತಃ ಕುರುಬರದು ಭಂಡಾರ ಸಂಸ್ಕೃತಿ. ಆದರೆ ೧೨ನೆಯ ಶತಮಾನದಲ್ಲಿ ಜರುಗಿದ ಈ ಸಮಾಜೋಧಾರ್ಮಿಕರ ಚಳುವಳಿಯಿಂದಾಗಿ ಅನೇಕ ಹಿಂದುಳಿದ ಮತಗಳಂತೆ ಹಾಲುಮತವೂ ವಿಭೂತಿ ಸಂಸ್ಕೃತಿಗೆ ಒಲಿಯಿತು"[೪೩] ಆದರೆ ಹಾಲುಮತರು ಇಡಿಯಾಗಿ ವಿಭೂತಿ ಸಂಸ್ಕೃತಿಯನ್ನು ಒಪ್ಪಿಕೊಳ್ಳದೆ ಬೆರಳೆಣಿಕೆಯ ಕೆಲವರು ಒಪ್ಪಿದ್ದಾರೆಂದು ಶ್ರೀರಾಮ ಇಟ್ಟಣ್ಣನವರು ತಿಳಿಸಿದ್ದಾರೆ.

"ಮೂಲತಃ ಭಂಡಾರ ಸಂಸ್ಕತಿಯ ಬೀರಪ್ಪನನ್ನು ವಿಭೂತಿ ಸಂಸ್ಕೃತಿಯೊಳಗೆ ಸೆಳೆದುಕೊಂಡು ಬದಲಾವಣೆಯನ್ನು ನೋಡುವುದಾದರೆ ಶರಣರು ಬೀರಪ್ಪನನ್ನು ಹಾದಿಬೀದಿ ದೈವ ಎಂದು

ಜರಿದಾಗ ಬೀರಪ್ಪನಿಗೆ ನೀನು ಶಿವ ಎಂದು ಕರೆದವರು ರೇವಣಸಿದ್ಧರು ಇದಕ್ಕೆ ಒಂದು ಸಂಸ್ಕೃತಿ ಆಚರಣೆಯಲ್ಲಿ ನೋಡುವುದಾದರೆ ಬೀರಪ್ಪನ ಜೀವಂತ ರೂಪವಾದ ದಳವಾಯಿಯನ್ನು ಮೆರವಣಿಗೆಯಲ್ಲಿ ಅವನ ಭಂಟರಾದ ಈರಗಾರರು ಈರಿಕೆ ಮಾಡಿ 'ಸುಖ್ ಸುಖ್ ಶಿವ ಶಿವ್, ಶಿವ್ವೋ ಸುವ್ವೋ' ಎಂದು ಸ್ವಾಗತಿಸುತ್ತಾರೆ. ಇದರ ಅರ್ಥವೆಂದರೆ ಎಲ್ಲವೂ ಸಮೃದ್ಧವಾಗಿದೆ. ಶಿವನೆ ಓ ಶಿವನೆ ಮುಂದಡಿಯಿಟ್ಟು ಬಾ" ಎಂಬುದಾಗಿದೆ. ಇಲ್ಲಿ ಬೀರಪ್ಪನನ್ನು ಶಿವನ ರೂಪ ಎಂದು ಮೊದಲು ಒಪ್ಪಿ ಪ್ರಚುರಪಡಿಸಿದವರು ರೇವಣಸಿದ್ದರು ಎನ್ನಬಹುದಾಗಿದೆ[೪೪] ಎಂದು ಲಿಂದಹಳ್ಳಿ ಹಾಲಪ್ಪನವರು 'ಪಂಥ-ಪ್ರಭಾವ' ಎಂಬ ಕೃತಿಯಲ್ಲಿ ತಿಳಿಸಿದ್ದಾರೆ.

ಭಂಡಾರ ಮತ್ತು ವಿಭೂತಿ ಸಂಸ್ಕೃತಿಯ ಸಂಪ್ರದಾಯ ಆಚರಣೆಗಳನ್ನು ಈ ಕಳಗಿನಂತೆ ಕಾಣಬಹುದಾಗಿದೆ.

**ಭಿಂಗಯ್ಯನ ಸಂಪ್ರದಾಯ :**

ಹಾಲುಮತ ಸೋಮಬೀರಪ್ಪನ ಜೀವಂತ ಗುರುರೂಪವಾಗಿದ್ದಾನೆ. "ಭಿಂಗಯ್ಯನಿಗೆ ಸೇರಿದ ಪವಿತ್ರ ವಸ್ತುಗಳೆಂದರೆ ಜೋಳಿಗೆ, ಚಾಟಿ, ಬೆತ್ತ, ವಿಭೂತಿ ಮತ್ತು ಭಂಡಾರಗಳಾಗಿವೆ. ಭಿಂಗಯ್ಯನ ಜೋಳಿಗೆಯಲ್ಲಿ ಭಂಡಾರ ಮತ್ತು ವಿಭೂತಿ ಈ ಎರಡೂ ಪ್ರೋಕ್ಷಣೀಯ ವಸ್ತುಗಳು ಇರುವುದು ಕುತೂಹಲಕಾರಿಯಾಗಿದೆ. ಭಿಂಗಯ್ಯನು ಭಂಡಾರ ಮತ್ತು ವಿಭೂತಿ ಎರಡನ್ನೂ ಧರಿಸುತ್ತಾನೆ. ಅಂದರೆ ಭೃಂಗಿಯು ನಾಥ ಮತ್ತು ಶೈವಸಿದ್ಧ ಸಂಪ್ರದಾಯ ಎಂಬ ಎರಡು ಶೈವ ಸಂಪ್ರದಾಯಗಳ ಕೊಂಡಿಯಾಗಿ ನಿಲ್ಲುತ್ತಾನೆ"[೪೫] ಎಂದು ತಿಳಿಯಬಹುದಾಗಿದೆ.

**ಈರಿಕೆ-ಪರಿಷ್ಕೃತ ಸಂಪ್ರದಾಯ :**

ಕುರುಬರ ಕುಲದೈವ ಬೀರಪ್ಪನ ಹಲವಾರು ಸಂಪ್ರದಾಯಗಳನ್ನು ಕುಲಗುರು ರೇವಣಸಿದ್ಧರು ಪರಿಷ್ಕೃತಗೊಳಿಸಿರುವುದು ಐತಿಹಾಸಿಕ ಸತ್ಯವಾಗಿದೆ. ಅವುಗಳಲ್ಲಿ ದಳವಾಯಿಯ ಸೃಷ್ಟಿ ಮತ್ತು ಈರಗಾರನ ಆಚರಣೆಯ ಬದಲಾವಣೆಗಳು ಗಮನಿಸತಕ್ಕ ಆಚರಣೆಗಳಾಗಿವೆ.

ಮಧ್ಯ ಕರ್ನಾಟಕದ ಹಲವು ಜಿಲ್ಲೆಗಳಲ್ಲಿ ನಡೆಯುವ ಬೀರದೇವರ ಜಾತ್ರೆ ಮತ್ತು ಉತ್ಸವಗಳಲ್ಲಿ ಪರಿಷ್ಕೃತಗೊಂಡ ಈರಗಾರ ಮತ್ತು ಅವನ ಈರಗಾರಿಕೆಯನ್ನು ನೋಡಬಹುದು. "ಇವರು ಶುಭ್ರ, ಬಿಳಿಪಂಚೆ ಉಟ್ಟು ಬರಿಮೈಯಲ್ಲಿ ತಲೆಗೆ ಬಿಳಿ ರುಮಾಲು ಸುತ್ತಿಕೊಂಡಿರುತ್ತಾರೆ. ಕೊರಳಲ್ಲಿ ಹೂಮಾಲೆ, ಮೈತುಂಬಾ ವಿಭೂತಿಯನ್ನು ಹಚ್ಚುತ್ತಾರೆ. ಹಣೆಯಲ್ಲಿ ಮಾತ್ರ ಭಂಡಾರ ಧರಿಸಿರುತ್ತಾರೆ. ಚಿಕ್ಕ ಕಬ್ಬಿಣದ ಸರಳಿನಾಕಾರದ ಅಲಗನ್ನು ಹಿಡಿದು ಸುತ್ತ ನಾಲ್ಕೂ ದಿಕ್ಕಿನ ದೇವರಿಗೆ ನಮಸ್ಕರಿಸಿ 'ಸುಖ್, ಸುಖ್, ಶಿವ್, ಶಿವ್ವೋ, ಸುವ್ವೋ' ಎಂದು ಸ್ವಾಗತಿಸುವುತ್ತಾರೆ. ಎರಡೂ ಕೈಗಳಿಂದ

ಹಿಡಿದ ಅಲಗಿನಿಂದ ಹೊಕ್ಕುಳ ಭಾಗಕ್ಕೆ ಹೊಡೆದುಕೊಳ್ಳುತ್ತಾರೆ. ಇಲ್ಲಿ ಡೊಳ್ಳಿನ ಅಬ್ಬರವಿರದೇ ಡೋಲು, ವಾಲುಗ ಇತ್ಯಾದಿ ನಾದವಿರುತ್ತಿದೆ. ಕೆಲವು ಪ್ರದೇಶದಲ್ಲಿ ದಳವಾಯಿ ಕುಣಿತದಲ್ಲಿ ಡೊಳ್ಳುನಾದವೂ ಕೇಳಿಸುತ್ತದೆ. ಮೂಲತಃ ಭಂಡಾರ ಸಂಸ್ಕೃತಿಗೆ ಸೇರಿದ ಬೀರಪ್ಪನ ಭಂಟನನ್ನು ವಿಭೂತಿ ಸಂಸ್ಕೃತಿಯೊಳಗೆ ಸೆಳೆದುಕೊಂಡ ಬದಲಾವಣೆಯನ್ನು ನಾವಿಲ್ಲಿ ಗಮನಿಸಬಹುದಾಗಿದೆ[೪೬] ಎಂದು ಲಿಂಗದಹಳ್ಳಿ ಹಾಲಪ್ಪನವರು ತಿಳಿಸಿದ್ದಾರೆ.

**ಮದುವೆಗೆ ಭಂಡಾರ, ಮೋಕ್ಷಕ್ಕೆ ವಿಭೂತಿ :**

ಕುರುಬರ ಗುರುಗಳಾದ ಅಮೋಘ ಸಿದ್ಧ ಒಡೆಯರು ಮೂಲತಃ ಭಂಡಾರ ಸಂಸ್ಕೃತಿಗೆ ಸೇರಿದವರೂ ಕಾಲಕ್ರಮದಲ್ಲಿ ವಿಭೂತಿಯನ್ನು ಧಾರ್ಮಿಕ ಆಚರಣೆಯಲ್ಲಿ ಬಳಸಿಕೊಳ್ಳುತ್ತಿರುವುದು ಕಂಡುಬರುತ್ತದೆ. ಇದಕ್ಕೆ ಉದಾಹರಣೆಯಾಗಿ ಜೇವರಗಿ ತಾಲೂಕಿನ ಕೊಲ್ಲೂರು ಗ್ರಾಮದಲ್ಲಿ ವಿಭೂತಿ ಒಡೆಯನ ಪೂಜಾ ಆಚರಣೆಯನ್ನು ನೋಡಬಹುದಾಗಿದೆ.

"ಅಮೋಘ ಒಡೆಯರ ಹಲವಾರು ಗುಡಿಗಳಲ್ಲಿ ಭಂಡಾರ ತಟ್ಟೆ ಹಾಗೂ ವಿಭೂತಿ ತಟ್ಟೆ ಇಟ್ಟಿರುತ್ತಾರೆ. ಈ ದೃಷ್ಟಿಯಿಂದ ಇವರದು ಭಂಡಾರ ಮತ್ತು ಭಸಿತಗಳ ಪದವಾದ ಮಿಶ್ರಣದ ಪಂಥವೆಂದು ಭಾವಿಸಬಹುದು. ತಮ್ಮ ಭಕ್ತರ ಮನೆಯಲ್ಲಿ ಮದುವೆ ಕಾರಣಕ್ಕೆ ಆಮಂತ್ರಣ ಬಂದರೆ ಅವರು ಭಂಡಾರ ಚೀಲವನ್ನು ಹೆಗಲಿಗೆ ಹಾಕಿಕೊಂಡು ಹೋಗುತ್ತಾರೆ. ಭಕ್ತರ ಶಿವಸಂಸ್ಕಾರಕ್ಕೆ ಹೋಗಬೇಕಾದ ಸಂದರ್ಭದಲ್ಲಿ ಅವರು ಭಂಡಾರ ಚೀಲವನ್ನು ಒಯ್ಯುವುದಿಲ್ಲ. ಬದಲಿಗೆ ವಿಭೂತಿಯನಯ್ನು ಒಯ್ಯುತ್ತಾರೆ. ಮೃತನಾದವನ ಹಣೆಗೆ ಇವರು ವಿಭೂತಿ ಲೇಪನ ಮಾಡುತ್ತಾರೆ. ನಿರ್ಜೀವಕ್ಕೆ ಭಂಡಾರ ಬಳಕೆಗೆ ನಿಷಿದ್ಧವಾಗಿದೆ. ಬದುಕಿದವರಿಗೆ ಭಂಡಾರ ಔಷಧಿಯಾದರೆ ಸತ್ತವರ ಮೋಕ್ಷಕ್ಕೆ ವಿಭೂತಿ ಶ್ರೇಷ್ಠವೆಂಬ ಭಾವನೆ ಒಡೆಯರದ್ದಾಗಿದೆ"[೪೭] ಎಂದು ಲಿಂಗದಹಳ್ಳಿ ಹಲಪ್ಪನವರು ಹೇಳಿದ್ದಾರೆ.

ಹಾಲುಮತ ಸಮುದಾಯದಲ್ಲಿ ದಾಸ ಕುರುಬರು ಭಂಡಾರ ಮತ್ತು ವಿಭೂತಿಗಳು ಕುರುಬರ ಎರಡು ಧಾರ್ಮಿಕ, ಸಾಂಸ್ಕೃತಿಕ ಲಾಂಛನವಾಗಿದೆ. ಕುರುಬರ ಸಮೂಹವು ವಿಶಾಲವಾಗಿದ್ದು ಕರ್ನಾಟಕದಾದ್ಯಂತ ಪಸರಿಸಿದೆ. ಕೆಲವು ಕಡೆ ತಿಮ್ಮಪ್ಪನ ಆರಾಧನೆಯು ಕಾಣುತ್ತೇವೆ. ಮೈಲಾರ ಮತ್ತು ತಿಮ್ಮಪ್ಪ ಅಳಿಯಮಾವಂದಿರಾಗಿದ್ದರ ಸಂಕೇತವಾಗಿದೆ. ಎಂದು ತಿಳಿಯಬಹುದಾಗಿದೆ.

ಭಿಂಗಯ್ಯ ತನ್ನ ಜೋಳಿಗೆಯಲ್ಲಿ ಭಂಡಾರ ಮತ್ತು ವಿಭೂತಿ ಎರಡನ್ನು ಧರಿಸಿ ಕುರುಬರಿಗೆ ಭಂಡಾರ ಪೂಸಿಸುತ್ತ ಶರಣ ಸಂಪ್ರದಾಯದವರಿಗೆ ವಿಭೂತಿ ಪೂಸಿಸುತ್ತ ಹರಸುವುದು ಆಶೀರ್ವದಿಸುವುದು ಕುರುಬ–ಲಿಂಗವಂತರ ಧಾರ್ಮಿಕ ಸಮನ್ವಯದ ಕುರುಹಾಗಿ ಕಂಡುಬರುತ್ತದೆ.

"ಭಂಡಾರವು ಪವಿತ್ರತೆಯ ಸಂಕೇತವಾಗಿ ಬಳಸಲಾಗುತ್ತಿದೆ. ವೈಜ್ಞಾನಿಕವಾಗಿ ಅರಿಷಿಣವು ರೋಗ ನಿವಾರಕ ಔಷಧಿಗುಣ ಹೊಂದಿದೆ. ಜಾಗತೀಕರಣದ ಸೆಳೆಯಲ್ಲಿ ಸಿಲುಕಿದ ಜನಾಂಗ ಭಂಡಾರದಿಂದ ವಿಭೂತಿಯತ್ತ ವಾಲುತ್ತಿರುವುದನ್ನು ಗುರುತಿಸಬಹುದು. ವಿಭೂತಿ ಪ್ರಧಾನ ಮಾಡುವುದು ಈ ಎಲ್ಲ ಪುರಾಣ ಕಾವ್ಯಗಳಲ್ಲಿ ಕಾಣುತ್ತೇವೆ. ಇದರ ಕೇಂದ್ರಪ್ರಜ್ಞೆ ಕುಲಭೇದ ನಿರಾಕರಣೆಯಾಗಿರುವುದು ಶೈವದಿಂದ ವೀರಶೈವದತ್ತ, ಭಂಡಾರದಿಂದ ವಿಭೂತಿಯತ್ತ ವಾಲುವ ಪ್ರಸಂಗಗಳು ಹೇರಳವಾಗಿವೆ. ೧೨ನೇ ಶತಮಾನದ ಶರಣರ ವೀರಶೈವ ಸಂಪ್ರದಾಯಗಳೊಂದಿಗೆ ಹಾಲುಮತದ ಸಂಪ್ರದಾಯಗಳು ತಳಕು ಹಾಕಿಕೊಂಡಿವೆ"[೪೮] ಎಂದು ಅನ್ನಪೂರ್ಣ ಗೋಸ್ಬಾಳ ಅವರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಒಟ್ಟಾರೆ, ಸಂಪ್ರದಾಯ-ಆಚರಣೆಗಳು ಜನಪದರ ಜೀವನದಲ್ಲಿ ಬದಲಿಸಬಹುದು. ಆದರೆ ಹಿಂದಿನ ಪೀಳಿಗೆಯಿಂದ ನಡೆದುಬಂದ ಅನೇಕ ವರ್ಷಗಳಿಂದ ತನ್ನ ದೇವರುಗಳ ಮೂಲಕ ನಂಬಿಕೊಂಡು ಬಂದ ಆಚರಣೆಗಳನ್ನು ಬದಲಿಸುವುದು ಕಷ್ಟದ ಮಾತು. ಮನುಷ್ಯನ ಜೀವನದಲ್ಲಿ ರೀತಿ-ನೀತಿ ಏನೇ ಇರಲಿ ಸಾಮಾಜಿಕವಾಗಿ ಭಂಡಾರ ಪವಿತ್ರ ಸ್ಥಾನ ಪಡೆದಿದೆ ಎಂಬುದು ಸತ್ಯವಾಗಿದೆ. ಮಂಗಳ ಕಾರ್ಯದಲ್ಲಿ ಪೂಜಾವಿಧಿ ವಿಧಾನದಲ್ಲಿ ಭಂಡಾರಕ್ಕೆ ವಿಭೂತಿಗಿಂತ ಹೆಚ್ಚಿನ ಸ್ಥಾನ-ಮಾನ ದೊರೆತಿರುವುದು ಒಂದು ಮಹತ್ವಪೂರ್ಣವಾದ ವಿಷಯವಾಗಿದೆ. ಹಾಲುಮತ ಸಮುದಾಯದವರು ಇದನ್ನು ಇಂದಿಗೂ ಆಚರಣೆ ಮತ್ತು ಸಂಪ್ರದಾಯದಲ್ಲಿ ಬೆಳೆಸಿಕೊಂಡು ಬಂದಿರುವುದು ಒಂದು ಮಹತ್ತರ ಕೊಡುಗೆಯಾಗಿದೆ ಎಂಬುದು ಸತ್ಯಸಂಗತಿಯಾಗಿದೆ.

## II. ನಂಬಿಕೆಗಳು

ನಂಬಿಕೆಗಳು ವಿಶ್ವವ್ಯಾಪ್ತಿಯಾಗಿರುವುದು ಸರ್ವವಿಧಿತ. ಮಾನವನ ಜೀವನದಲ್ಲಿ ಅವು ಪ್ರಮುಖ ಪಾತ್ರವಹಿಸುವುದಲ್ಲದೆ ಜನಪದರ ಬದುಕನ್ನು ನಿರ್ಧರಿಸುವ ಸಂವಿಧಾನಗಳಾಗಿವೆ. ಮಾನವನ ಜೀವನ ಯಶಸ್ವಿಯಾಗಬೇಕಾದರೆ ಪುರುಷ ಪ್ರಯತ್ನ ಜೊತೆಗೆ ದೇವಾನುಗ್ರಹದ ಅಗತ್ಯವೂ ಇದೆ. 'ತೃಣಮಪಿ ನ ಚಲತಿ ತೇ ನವಿನಾ' ಅಂದರೆ ಪರಮಾತ್ಮನ ಸಂಕಲ್ಪವಿಲ್ಲದೆ ಒಂದು ಹುಲ್ಲು ಕಡ್ಡಿಯೂ ಚಲಿಸಲಾರದು. ಸಮಸ್ತ ಸೃಷ್ಟಿಯೂ ಅವ್ಯಕ್ತವಾದ ಅಗೋಚರವಾದ ಒಂದು ಶಕ್ತಿಯ ನಿಯತಿಗೆ ಒಳಪಟ್ಟಿದೆ. ಅದರ ಅನುಗ್ರಹ ಸಮಸ್ತ ಜೀವಿಗಳಿಗೂ ಅಗತ್ಯ ಎಂಬ ನಂಬಿಕೆ ಜನಪದರಲ್ಲಿ ಒಡಮೂಡಿದೆ.

ಜನಪದರು ಆಚರಿಸುವ ಎಲ್ಲಾ ಆಚರಣೆಗಳಿಗೆ ನಂಬಿಕೆಯೇ ಜೀವಾಳ. ನಂಬಿಕೆಗಳು ವ್ಯಕ್ತಿಗಳ ಜೀವನದಲ್ಲಿ ಬಹುಮುಖ್ಯವಾದ ಪಾತ್ರವನ್ನು ವಹಿಸುತ್ತದೆ. ಕೆಲವು ಸಾರಿ ವ್ಯಕ್ತಿಯ ಬದುಕಿನಲ್ಲಿ ಶ್ರದ್ಧೆಯನ್ನುಂಟುಮಾಡಿ ಆ ಮೂಲಕ ವ್ಯಕ್ತಿಯ ಮನಸ್ಸಿನ ಮೇಲೆ ಪ್ರಭಾವ ಬೀರಿ ಕಾರ್ಯೋನ್ಮುಖಿಯಾಗುವಂತೆ ಪ್ರೇರೇಪಿಸುತ್ತದೆ. ಇಂಥ ನಂಬಿಕೆಗಳನ್ನು ನೋಡಿದಾಗ ಒಂದು ರೀತಿಯಲ್ಲಿ ಜನಪದರ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಬಳಸುವ ವಿಧಾನಗಳಂತಿರುತ್ತದೆ.

ಹಾಲುಮತದ ಭಂಡಾರ ಸಂಸ್ಕೃತಿಯ ಅಧ್ಯಯನದಲ್ಲಿ ಬಹುತೇಕ ಆಚಾರ–ವಿಚಾರ ವ್ಯವಹಾರಗಳು ನಂಬಿಕೆ ಹಿನ್ನೆಲೆಯನ್ನು ಪಡೆದಿವೆ. ಪ್ರಸ್ತುತ ಕೆಲವು ಆಯ್ದ ನಂಬಿಕೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ನಂಬಿಕೆಗಳಿಗೆ ಕೆಲವು ಪವಾಡ ಸದೃಶ್ಯಗಳೇ ಪ್ರಮುಖ ಪಾತ್ರವಹಿಸುತ್ತವೆ. ಪವಾಡಗಳು ಅತೀಂದ್ರಿಯ ಶಕ್ತಿಯಿಂದ ನಡೆಯುವ ಅಘಟಿತ ಘಟನೆ. ಈ ತರಹ ಘಟನೆಯನ್ನು ಪವಾಡವೆಂದು ಕರೆಯುತ್ತಾರೆ. ಇಂತಹ ಪವಾಡಗಳು ಜನಪದ ಮತ್ತು ಭಕ್ತ ವೃಂದರ ನಂಬಿಕೆಯನ್ನು ವ್ಯಕ್ತಪಡಿಸುತ್ತದೆ.

**೧. ಬಗನಿಗೂಟ :**

"ಮೈಲಾರಲಿಂಗನ ಭಕ್ತವರ್ಗದಲ್ಲಿ ಕಾಂಚವೀರರು ಇರುತ್ತಾರೆ. ಇವರು ಬಗನಿಗೂಟ ಮತ್ತು ಸರಪಳಿ ಪವಾಡ ಮಾಡುತ್ತಾರೆ. ಇವರು ಹಣೆಗೆ ಮತ್ತು ಕೆನ್ನೆಗೆ ಭಂಡಾರವನ್ನು ಶ್ರೀ ಗುರುಗಳಿಂದ ಲೇಪಿಸಿಕೊಂಡು ಆಶೀರ್ವಾದಿಸಿದ ನಂತರ ಒಬ್ಬರು ಬಗನಿಗೂಟವನ್ನು ಕಾಲಿನ ಮೀನಕಂಡಕ್ಕೆ ಹೊಡೆದುಕೊಂಡರು. ಆ ಗೂಟ ಕಾಲನ್ನು ಕೊರೆದುಕೊಂಡು ಹೊರಬಂದಿತು. ನಂತರ ಗೂಟವನ್ನು ಹೊರತೆಗೆದು ಮುಳ್ಳಿನ ಕಡ್ಡಿ ಮತ್ತು ಸಲಾಕೆಯನ್ನು ತೂರಿಸಿ ಹೊರತೆಗೆಯುತ್ತಾರೆ. ನಂತರ ಬಗನಿಗೂಟ ಹೊಡೆದ ಜಾಗಕ್ಕೆ ಶ್ರೀ ಗುರುಗಳು ಭಂಡಾರ ಹಚ್ಚುತ್ತಾರೆ. ಆಗ ಅವನು ಏನು ಆಗಿಲ್ಲವಂತೆ ಆಸಾಯವಾಗಿ ನಡೆದುಕೊಂಡು ಹೋಗುತ್ತಾನೆ"[೪]

ಇದೇ ರೀತಿ ಮೈಲಾರದಲ್ಲಿ ಸರಪಳಿ ಪವಾಡ ಮಾಡುವಾಗ ಭಂಡಾರವನ್ನು ಸರಪಳಿಗಳಿಗೆ ಹಚ್ಚಿ ಪೂಜೆ ಮಾಡುತ್ತಾರೆ. ಅದೇ ರೀತಿ ಕಂಚಾವೀರರು ಬಲಗೈ ಮಣಿಕಟ್ಟಿಗೆ ಐದು ಬತ್ತಿಯುಳ್ಳ ಸಲಾಕೆಯನ್ನು ಚುಚ್ಚಿಕೊಂಡು ಸ್ವಾಮೀಜಿಯವರು ದೇವರಿಗೆ ಆರತಿಯನ್ನು ಮಾಡುವುದು ಇವನಿಗೆ ಸ್ವಾಮೀಜಿಯವರು ಭಂಡಾರ ಲೇಪಿಸಿ ಆಶೀರ್ವಾದಿಸುತ್ತಾರೆ. ಇದಕ್ಕೆ ಶಸ್ತ್ರಾಪವಾಡವೆನ್ನುತ್ತಾರೆ.

ಇಲ್ಲಿನ ಒಂದು ವಿಶೇಷವೆಂದರೆ ಬಗನಿಗೂಟ ಹೊಡೆದ ಜಾಗದಿಂದ ಸ್ವಲ್ಪವು ರಕ್ತಸ್ರಾವವು ಆಗುವುದಿಲ್ಲ. ಆ ಜಾಗಕ್ಕೆ ದೇವರ ಹೂವನ್ನು ಮತ್ತು ಭಂಡಾರ ಇಟ್ಟು ಬಟ್ಟೆಯಿಂದ ಕಟ್ಟುತ್ತಾರೆ.

ಒಂದು ವೇಳೆ ರಕ್ತಸ್ರಾವವಾದರೆ ಆ ವ್ಯಕ್ತಿಯಿಂದ ಏನೋ ತಪ್ಪು ಮಾಡಿದ್ದಾನೆಂದು ಭಕ್ತರ ನಂಬಿಕೆಯಾಗಿದೆ. ಇಲ್ಲಿ ಭಂಡಾರ ಒಂದು ಔಷಧಿಯಾಗಿ ಗಾಯಗಳಿಗೆ ಲೇಪಿಸುವುದೇ ಪವಾಡಗಳಲ್ಲಿ ಮಹತ್ವದಾಗಿದೆ.

**೨. ಕೊಪ್ಪರಿಕೆಯಲ್ಲಿ ಭಂಡಾರ :**

"ಹಾಲುಮತ ದೈವಗಳ ಜಾತ್ರೆಗಳ ಸಾಮೂಹಿಕ ಭೋಜನದ ಸಂದರ್ಭದಲ್ಲಿ ಅಡುಗೆ ಮಾಡಲು ಕೊಪ್ಪರಿಕೆಯನ್ನು ಬಳಸುತ್ತಾರೆ. ಕೊಪ್ಪರಿಗೆಯಲ್ಲಿ ಹುಗ್ಗಿ ಸಿದ್ದವಾದ ಮೇಲೆ ಬೀರಪ್ಪನ ಪೂಜಾರಿ ಅಂದರೆ ದೇವರಸಿ ಕೊಪ್ಪರಿಕೆಯಲ್ಲಿ ಮೂರು ಸುತ್ತು ಪ್ರದಕ್ಷಣೆ ಹಾಕಿ ಕೊಪ್ಪರಿಕೆಯಲ್ಲಿ ಭಂಡಾರ ತೂರಿ ಆವೇಶಭರಿತವಾಗಿ ಸುಡುವ ಹುಗ್ಗಿಯಲ್ಲಿ ಕೈಹಾಕುತ್ತಾನೆ. ಆಗ ಮಾಡಿದ ಅಡುಗೆ ಪವಿತ್ರವಾದಂತೆಂದು ಜನಪದರ ನಂಬಿಕೆಯಾಗಿದೆ. ನಂತರ ಭಕ್ತರು ಭಕ್ತಿ ಶ್ರದ್ಧೆಯಿಂದ ಪ್ರಸಾದ ರೂಪದಲ್ಲಿ ತೆಗೆದುಕೊಳ್ಳುತ್ತಾರೆ"[೫೦] ಎಂದು ಎಸ್.ಎಸ್. ಅಂಗಡಿಯವರು ಭಂಡಾರದ ಬಗ್ಗೆ ತಿಳಿಸಿದ್ದಾರೆ.

**ಹಾಲು ಉಕ್ಕಿಸುವ ಹಬ್ಬ :**

ಕೆಲವು ಸಮಾರಂಭಗಳಲ್ಲಿ ಶುಭ ಸಂಕೇತವಾಗಿ ಹಾಲು ಉಕ್ಕಿಸುವ ಹಬ್ಬದ ಕಾರ್ಯಕ್ರಮ ನಡೆಯುತ್ತದೆ. ಕಾಯಿಸುವಾಗ ಹಾಲು ಉಕ್ಕಿದರೆ ಶುಭ ಫಲ ಎಂಬ ನಂಬಿಕೆ ಇದೆ. ಈ ಹಬ್ಬ ಫೆಬ್ರವರಿ ತಿಂಗಳಲ್ಲಿ ರಥ ಸಪ್ತಮಿಯ ದಿನ ನಡೆಯುತ್ತದೆ. ಮುಂದೆ ಬರುವ ಜಾತ್ರೆಯ ಕೆಲಸ ಕಾರ್ಯಗಳು ನಿರ್ವಿಘ್ನವಾಗಿ ನಡೆಯಲಿ ಲೋಕ ಕಲ್ಯಾಣವಾಗಲಿ ಎಂಬ ಭಾವನೆಯಿಂದ ಮೈಲಾರಲಿಂಗನ ಜಾತ್ರೆಗೆ ಮೊದಲೇ ಈ ಹಬ್ಬ ನಡೆಯುತ್ತದೆ. ದೇವಾಲಯದ ಮುಂದಿನ ಆವರಣದ ಅಗ್ನಿ ಮೂಲೆಯಲ್ಲಿ ಈ ಕಾರ್ಯಕ್ರಮ ನಡೆಯುತ್ತದೆ.

"ಸುಟ್ಟ ಗೋಮದ ಬೆರಣಿಗಳನ್ನು ಒಟ್ಟಿ ಅದರ ಮೇಲೆ ಕೊಳಗವನ್ನು ಸಮಮಟ್ಟವಾಗಿ ಇಡುತ್ತಾರೆ. ಅದಕ್ಕೆ ಭಕ್ತಾದಿಗಳು ಹಾಲು ತಂದು ಸುರಿಯುತ್ತಾರೆ. ಶ್ರೀ ಗುರುಗಳು ಮಂಗಳಾರತಿ ಮಾಡಿ ಹಾಲಿಗೆ ಭಂಡಾರ ಹಾಕುತ್ತಾರೆ. ಮತ್ತು ಬೆರಣಿಗೂ ಭಂಡಾರ ಹಾಕುತ್ತಾರೆ. ಮಂಗಳಾರತಿಯ ಕರ್ಪೂರವನ್ನು ಬೆರಣಿಯ ಮೇಲೆ ಹಾಕುತ್ತಿದ್ದಂತೆಯೇ ಬೆರಣಿ ಹತ್ತಿ ಉರಿಯುತ್ತದೆ. ಹಾಲು ಕಾಯ್ದು ಉಕ್ಕುತ್ತದೆ. ಯಾವ ದಿಕ್ಕಿನ ಕಡೆಗೆ ಉಕ್ಕುತ್ತದೆಯೋ ಆ ಕಡೆಯ ಪ್ರದೇಶಕ್ಕೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಇದೆ"[೫೧] ಅಕ್ಕಿ ಬೆಲ್ಲ ಮುಂತಾದ ಹಾಕಿ ಗಿಣ್ಣ ಮಾಡಿ ಮಹಾಪ್ರಸಾದವನ್ನು ಭಕ್ತರಿಗೆ ಹಂಚುತ್ತಾರೆ ಎಂದು ಶ್ರೀ ಕೃಷ್ಣಪ್ಪನವರು ತಿಳಿಸಿದ್ದಾರೆ.

**ದೊಡ್ಡ ಪಾದುಕೆಗಳ ಪೂಜೆ :**

ಹಾಲುಮತ ಧಾರ್ಮಿಕ ಪರಂಪರೆಯಲ್ಲಿ ಸಾಮಾನ್ಯವಾಗಿ ಪಾದಪೂಜೆಯು ವಿರಳವಾಗಿ ಕಂಡುಬರುವ ಪೂಜೆಯೆನ್ನಿಸಿದೆ. ಧಾರ್ಮಿಕ ಪರಿಕರಗಳಾದ ಪಲ್ಲಕ್ಕಿ, ಸತ್ತಿಗೆ ಕುದುರೆ, ಅಲಗು, ಕಟ್ಟಲಗು ಮೊದಲಾದವುಗಳಿಗೆ ನಿತ್ಯಪೂಜೆ ಮಾಡಲಾಗುತ್ತದೆ. "ಮೈಲಾರಲಿಂಗನ ಸಂಪ್ರದಾಯದಲ್ಲಿ ಪಾದುಕೆಗಳನ್ನು ಭಂಡಾರದಿಂದ ಪೂಜೆಯನ್ನು ಹಿರೇಮೈಲಾರ ದೇವಸ್ಥಾನದಲ್ಲಿ ಪೂಜೆ ಮಾಡಲಾಗುತ್ತದೆ. ಮೈಲಾರಲಿಂಗನು ಪ್ರತಿಸಲ ಬೇಟೆಗೆ ಹೋಗುವಾಗ ಇವುಗಳನ್ನು ಧರಿಸಿ ಕುದುರೆಯ ಮೇಲೆ ಕುರುಬತ್ತೆವ್ವನನ್ನು ಕಾಣಲು ಹೋಗುತ್ತಾನೆಂಬ ನಂಬಿಕೆ ಭಕ್ತರದ್ದಾಗಿದೆ"[೫೨] ಈ ಪಾದುಕೆಗಳು ಕೇವಲ ಒಂದು ವರ್ಷಕ್ಕೆ ಮಾತ್ರ ಬರುತ್ತವೆ. ಸವೆದು ಹೋದ ಪಾದುಕೆಗಳನ್ನು ವರ್ಷಕ್ಕೊಮ್ಮೆ ಬದಲಾಯಿಸಲಾಗುತ್ತದೆ.



**ಫರಂಡಿ ನುಡಿ :**

"ಪಟ್ಟಣ ಕಡೋಲಿ ಕ್ಷೇತ್ರದಲ್ಲಿರುವ ಬೀರಪ್ಪ ಮತ್ತು ಇಟ್ಟಪ್ಪ ಜಾತ್ರೆಯ ಪ್ರತಿವರ್ಷ ಸೀಗೆ ಹುಣ್ಣಿಮೆಯಾದ ನಂತರ ಬರುವ ಮೃಗ ಮುಹೂರ್ತದಂದು ಸೇರುತ್ತದೆ. ಈ ಜಾತ್ರೆಯ ವಿಶೇಷವೆಂದರೆ 'ಫರಂಡಿ' ಎಂಬ ವೀರಗಾರ. ಇವನು ಜಾತ್ರೆಯ ದಿನ ಅಲಗು ಹಾಕಿ ಭವಿಷ್ಯದ ನುಡಿ ಹೇಳುತ್ತಾನೆ. ಈ ಸಂದರ್ಭದಲ್ಲಿ ಭಕ್ತರು ಭಂಡಾರವನ್ನು ಒಂದೇ ಸಮನೆ ತೂರುತ್ತಾರೆ. ಇಡೀ ಜಾತ್ರೆಯ ವಾತಾವರಣವು ಭಂಡಾರಮಯವಾಗಿರುತ್ತದೆ"[೫೩] ಇಲ್ಲಿನ ವಿಶೇಷವೆಂದರೆ ಇಂದಿನಿಂದ ಮುಂದಿನ ಜಾತ್ರೆಯವರೆಗಿನ ಮಳೆ-ಬೆಳೆಗೆ ಸಂಬಂಧಿಸಿದ ವಿಷಯ ಕುರಿತು ಭವಿಷ್ಯವನ್ನು ನುಡಿಯುವುದನ್ನು ಫರಂಡಿ ನುಡಿ ಎಂದು ಜನರು ಈ ಭವಿಷ್ಯವನ್ನು ನಿಷ್ಠೆಯಿಂದ ನಂಬುವರು.

**ಚೋಳ(ಚೇಳು) ಮರಡಿ ಪವಾಡ :**

"ಚೋಳ ಮರಡಿ ಎಂಬುದು ರಾಣಿಬೆನ್ನೂರಿನ ಹತ್ತಿರವೇ ಇರುವ ಒಂದು ಸಣ್ಣ ದಿಬ್ಬವಾಗಿದೆ. ಇಲ್ಲಿ ಬೀರದೇವರ ಒಂದು ಚಿಕ್ಕ ದೇವಸ್ಥಾನವಿದೆ. ಶ್ರಾವಣ ಮಾಸದ ಜಾತ್ರೆಯಲ್ಲಿ ಬೀರದೇವರು, ಇಲ್ಲಿಗೆ ಮೆರವಣಿಗೆಯಲ್ಲಿ ಆಗಮಿಸುತ್ತಾನೆ. ಇಲ್ಲಿ ದೇವರು ಪಟ್ಟಗೊಂಡು ಪೂಜೆಗೊಳ್ಳುತ್ತಾನೆ. ಈ ಮರಡಿಯಲ್ಲಿರುವ ಕಲ್ಲುಗಳನ್ನು ತೆಗೆದಾಗ ವಿಷದ ಚೇಳುಗಳು ಎದ್ದೇಳುತ್ತವೆ. ಭಕ್ತರು ಅವುಗಳನ್ನು ಹಿಡಿದರೂ ಮೈ ಮೇಲೆ ಹಾಕಿಕೊಂಡರೂ ಅವು ಕಚ್ಚುವುದಿಲ್ಲ. ಒಂದು ವೇಳೆ ಕಚ್ಚಿದರೂ ವಿಷಯವು ಏರುವುದಿಲ್ಲ ಎಂಬ ನಂಬಿಕೆ ಭಕ್ತರದ್ದಾಗಿದೆ. ಕಚ್ಚಿದ ಗಾಯದ ಮೇಲೆ ಸ್ವಲ್ಪ ಭಂಡಾರ ಹಾಕಿದರೆ ಏರಬೇಕಾದ ವಿಷವೆಲ್ಲ ನಶಿಸಿ ಹೋಗುವುದೆಂಬ ನಂಬಿಕೆಯಿದೆ"[೫೪] ಎಂದು ಕಾಣಬಹುದಾಗಿದೆ.

**ಭಂಡಾರದ ಕುರುಹು :**

ಉತ್ತರ ಕರ್ನಾಟಕದ ಬಾಗಲಕೋಟೆ ಮತ್ತು ಕೊಪ್ಪಳ ಜಿಲ್ಲೆಗಳಲ್ಲಿ ಹುಲ್ಲಪ್ಪ-ಚಂದ್ರಪ್ಪರೆಂಬ ಹಾಲುಮತ ದೈವಗಳಲ್ಲಿ ಚಂದ್ರಗಿರಿಯ ಚಂದ್ರಪ್ಪನ ಜಾತ್ರೆಯಲ್ಲಿ ನಡೆಯುವ ಒಂದು ಪವಾಡ ಇದಾಗಿದೆ. ಕಾರ್ಣಿಕದ ಮಳ್ಳಯ್ಯ "ಕಂಬಳಿ ಗದ್ದುಗೆಯ ಮೇಲೆ ಕುಳಿತು ಒಣ ಬಂಡಾರವನ್ನು ಅಂಗೈಯಲ್ಲಿ ಹಾಕಿಕೊಂಡು ತಿಕ್ಕತೊಡಗುತ್ತಾನೆ. ಹಾಗೆ ತಿಕ್ಕಿ ಭಂಡಾರ ನೀರು ನೀರಾದರೆ ಆ ವರ್ಷ ಮಳೆ-ಬೆಳೆ ಸಮೃದ್ಧಿಯೆಂತಲೂ ನಂಬಲಾಗುತ್ತದೆ"[೫೫] ಹುಡಿಹುಡಿ ಹಾರಿದರೆ ಬರಗಾಲ ನಿಶ್ಚಿತವೆಂದು ಭಾವಿಸುತ್ತಾರೆ.

**ಕೆಂಡ ತುಳಿಯುವುದು :**

ಹುಲಿಗೆಮ್ಮನ ಜಾತ್ರೆಯಲ್ಲಿ "ಕೆಂಡ ತುಳಿಯಲು ಪೂಜಾರಿಯು ಮುಖಕ್ಕೆ ಕುಂಕುಮ ಅರಿಶಿನ(ಬಂಡಾರ ಲೇಪಿಸಿಕೊಂಡು ಕೆಂಡ ತುಳಿಯುತ್ತಾನೆ. ಭಂಡಾರವನ್ನು ಪೂಜಾರಿಯು ಮುಖಕ್ಕೆ, ಲೇಪಿಸುವುದರಿಂದ ಅವನಲ್ಲಿ ದೇವಿಯ ಆವೇಶ ಬರುತ್ತದೆ"[೫೬] ಎಂಬ ನಂಬಿಕೆ ಭಕ್ತರಲ್ಲಿಯೂ ಕೂಡ ಅದೇ ರೀತಿ ತುಳಿದ ಕೆಂಡವನ್ನು ಹುಲಿಗೆಮ್ಮ ಭಂಡಾರವೆಂದು ಭಕ್ತರು ಅದನ್ನು ತೆಗೆದುಕೊಂಡು ಹೋಗಿ ತಮ್ಮ ಹೊಲಗದ್ದೆ ಮನೆಗಳಲ್ಲಿ ಚೆಲ್ಲುತ್ತಾರೆ. ಇದರಿಂದ ಒಳ್ಳೆಯ ಬೆಳೆಯಾಗುತ್ತದೆ ಎಂಬ ನಂಬಿಕೆಯಿದೆ.

**ಕಾರಣಿಕೋತ್ಸವ :**

ಬಳ್ಳಾರಿ ಜಿಲ್ಲೆ, ಹೂವಿನ ಹಡಗಲಿ ತಾಲೂಕಿನ ಮೈಲಾರದಲ್ಲಿ ಭಾರತ ಹುಣ್ಣಿಮೆಯ ದಿವಸ ಜಾತ್ರೆ ಜರುಗುತ್ತದೆ. ಭಕ್ತಾದಿಗಳು ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರಪ್ರದೇಶಗಳಿಂದ ಅಪಾರ ಸಂಖ್ಯೆಯಲ್ಲಿ ನೆರೆದಿರುತ್ತಾರೆ. "ಒಡೆಯರು ಮಾರ್ತಾಂಡ ಭೈರವನ ಭಾವದಲ್ಲಿ ನಿಂತು ಭಂಡಾರವನ್ನು ಅವನ ಮುಖಕ್ಕೆ ಮತ್ತು ಕೆನ್ನೆಗೆ ಲೇಪಿಸುತ್ತಾರೆ"[೫೭] ಕಾರಣಿಕದ ಗೋರವನು ನಿಲ್ಲಿಸಿರುವ ಬಿಲ್ಲನ್ನು ಸರಸರನೆ ಏರಿ ತುದಿಮುಟ್ಟಿ 'ಸದ್ದು ಸದ್ದಲೇ ಪರಾಕ್' ಎಂದಾಕ್ಷಣ ಕಾರಣಿಕ ಕೇಳಲು ನೆರೆದ ಜನಸ್ತೋಮವು ಸ್ತಬ್ದವಾಗುತ್ತದೆ. ನಂತರ ಆಕಾಶದ ಕಡೆನೋಡುತ್ತಾ ಒಗಟಿನ ರೂಪದಲ್ಲಿ ಒಂದೇ ವಾಕ್ಯದಲ್ಲಿ ಭವಿಷ್ಯ ನುಡಿಯುತ್ತಾನೆ. ಇದನ್ನು 'ಕಾರಣಿಕೋತ್ಸವ' ಎನ್ನುತ್ತಾರೆ.

ಉದಾ: 'ಮುತ್ತಿನ ರಾಶಿ ಮುತ್ತು ಬಗೀತಲೇ ಪರಾಕ್' ಅಂದಾಗ ವರ್ಷ ಸಮೃದ್ಧ ಮಳೆ-ಬೆಳೆ ಚೆನ್ನಾಗಿ ಆಗುತ್ತದೆ ಎಂಬ ನಂಬಿಕೆ ಜನರಲ್ಲಿ ಮೂಡುತ್ತದೆ. ಅದೇ ರೀತಿ 'ಮೃರ್ತ್ಯಕ್ಕೆ ಮಬ್ಬು ಕವೀತಲೇ ಪರಾಕ್' ಎಂದಾಕ್ಷಣ ಈ ವರ್ಷ ಕಷ್ಟ ಕಾರ್ಪಣ್ಯ ಜಾಸ್ತಿ ಎಂಬ ನಂಬಿಕೆ ಕಾಣಬಹುದಾಗಿದೆ.

ಒಟ್ಟಾರೆ, ಮಳೆ-ಬೆಳೆ ಭವಿಷ್ಯದ ಜೊತೆಗೆ ರಾಜಕೀಯದ ಭವಿಷ್ಯವನ್ನು ತಿಳಿದು ಕೊಳ್ಳುತ್ತಾರೆ. ರಾಜಕೀಯದಲ್ಲಿ ಈವರ್ಷ ಅಧಿಕಾರ ಇರೋರಿಗೆ ಅನುಕೂಲ ಇಲ್ಲ ಎಂದು ಕಾರಣಿಕೋತ್ಸವದ ಭವಿಷ್ಯವನ್ನು ನಂಬುತ್ತಾರೆ. ಇಲ್ಲಿ ರಾಜಕೀಯಾತ್ಮಕವಾದ ಮತ್ತು ಕೃಷಿಮೂಲದ ನಂಬಿಕೆಗಳು ಬೆರೆತಿರುವುದು ಒಂದು ವಿಶೇಷವಾಗಿದೆ. ಕಾರ್ಣಿಕ ನುಡಿಯುವ ಚುರುಕಾದ ನುಡಿಯಲ್ಲಿ ಒಂದು ವರ್ಷದ ಭವಿಷ್ಯ ಅಡಗಿರುತ್ತದೆ ಎಂಬ ನಂಬಿಕೆ ಮಹತ್ವದ ವಿಷಯವಾಗಿದೆ.

ಒಗಟಿನ ರೂಪದ ಹೇಳಿಕೆಗಳು ಜಾತ್ರೆ-ಉತ್ಸವಗಳಲ್ಲಿ ರಾಜಕೀಯ, ಸಾಮಾಜಿಕ, ಐತಿಹಾಸಿಕ ವಿಷಯಗಳ ಕುರಿತಾಗಿ ಅನುಭವದ ಹಿನ್ನೆಲೆಯಲ್ಲಿ ಹೇಳುವಂತಹ ಹೇಳಿಕೆಗಳು ಜನರ ನಂಬಿಕೆಯಿಂದ ಕೂಡಿವೆ.

ಹಾಲುಮತ ಸಮುದಾಯದ ಭಂಡಾರದ ಬಗ್ಗೆ ಇರುವ ಅವರ ನಂಬಿಕೆಯು ಶ್ರದ್ಧಾಭಕ್ತಿಯಿಂದ ಕೂಡಿದ್ದಾಗಿದೆ. ಜನಸಾಮಾನ್ಯರ ಜೀವನದಂತೆ ಅವರ ಸಂಸ್ಕೃತಿ ಇರುತ್ತದೆ. ಅವರ ಮಾತುಕತೆ ನಡುವಳಿಕೆಗಳು, ನಂಬಿಕೆಗಳ ಮೇಲೆ ರೂಪುಗೊಂಡಿರುತ್ತವೆ. ಅದೇ ರೀತಿ ಪಶುಪಾಲಕರಾದ ಕುರುಬರ ನಂಬಿಕೆಯು ಮುಗ್ಧತೆಯಿಂದ ಕೂಡಿದ್ದಾಗಿದೆ. ಹೀಗೆ ಭಂಡಾರ ಕೇವಲ ಅರಿಶಿಣದ ಪುಡಿಯಾಗಿರದೇ ಹಾಲುಮತ ಸಮುದಾಯದ ನಂಬಿಕೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ನಮ್ಮ ಜನಪದರಿಗೆ ನಂಬುಗೆಯೇ ಮೂಲಮಂತ್ರ, ಈ ದೃಷ್ಟಿಯಿಂದ ನಮ್ಮ ಮುಗ್ಧಭಕ್ತರು ನಂಬಿಕೆಯ ಆಧಾರದಿಂದ ಜೀವನವನ್ನು ಕಟ್ಟಿಕೊಳ್ಳಲು ಹವಣಿಸುತ್ತಾರೆ. ನಂಬಿಕೆಗಳು ಹೆಚ್ಚಿನ ಪ್ರಾಧಾನ್ಯತೆ ಇದ್ದು, ಎಷ್ಟೋ ವೇಳೆ ಅವು ಮೂಢನಂಬಿಕೆಗಳಾಗುವ ಸಾಧ್ಯತೆಗಳಿವೆ. ಒಟ್ಟಾರೆ ನಿಸರ್ಗದೊಡನೆ ಒಡನಾಟ, ಸೆಣಸಾಟ ನಡೆಸುತ್ತಾ ಸಾಮಾಜಿಕ ಬದುಕನ್ನು ಹಸನುಗೊಳಿಸುವ ನೀತಿಯಾಗಿ ಬಾಳಲು ಬೇಕಾದ ಸ್ಥೈರ್ಯ ಧೈರ್ಯಗಳನ್ನು ಹೆಚ್ಚಿಸುತ್ತಾ ನಂಬಿಕೆಗಳು ಧಾರ್ಮಿಕ ಮೂಲಗಳಾಗಿದ್ದು ಮಾನವನಿಗೆ ನಿರಂತರವಾಗಿ ನೆರವಾಗಿದೆ.

ಭಂಡಾರದ ಸಂಪ್ರದಾಯ-ಆಚರಣೆ ನಂಬಿಕೆಗಳ ಕುರಿತಾದ ಇಷ್ಟು ಅಧ್ಯಾಯನದಲ್ಲಿ ಭಂಡಾರದ ಸ್ಥಾನಮಾನಗಳನ್ನು ಗುರುತಿಸಲಾಗಿದೆ. ಕುರುಬರ ಇಷ್ಟದೈವಗಳಲ್ಲಿ, ಜಾತ್ರೆ-ಉತ್ಸವಗಳಲ್ಲಿ ಭಂಡಾರದ ಸಂಪ್ರದಾಯ-ಆಚರಣೆ-ನಂಬಿಕೆಗಳಲ್ಲಿ ಭಂಡಾರದ ನೆಲೆಯು ಪ್ರಾಚೀನತೆಯಿಂದ ಪರಂಪರೆಯಾಗಿ ತನ್ನ ಮಹತ್ವವನ್ನು ಉಳಿಸಿಕೊಂಡಿದೆ. ಹಿಂದಿನ ಪೀಳಿಗೆಯಿಂದ ಮುಂದಿನ ಪೀಳಿಗೆಯವರೆಗೂ ಭಂಡಾರ ತನ್ನ ಸ್ವರೂಪವನ್ನು ಉಳಿಸಿಕೊಂಡು ಕಾಲ-ಸಂದರ್ಭಗಳಲ್ಲಿ ತನ್ನ ಮಹತ್ವವನ್ನು ತಿಳಿಸುತ್ತಾ ಬೆಳೆಸುತ್ತಾ ಬಂದಿದೆ. ಭಂಡಾರವನ್ನು ಆಚರಣೆ-ಸಂಪ್ರದಾಯ ನಂಬಿಕೆಗಳಲ್ಲಿ ಪೂಜ್ಯಭಾವನೆಯಿಂದ ನೋಡುವುದಲ್ಲದೇ ಅದನ್ನು ದೈವತ್ವಕ್ಕೂ ಏರಿಸಿದೆ. ವೈಜ್ಞಾನಿಕ ದೃಷ್ಟಿಯಲ್ಲಿ ಔಷಧಿಯ ರೂಪವಾಗಿಯೂ ಬಳಕೆಯಾಗಿದೆ.

## ಕೊನೆ ಟಿಪ್ಪಣಿ

೧. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೩, ಪುಟ–೮೯, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೧೧

೨. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೩೮೦, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೩. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ–೧೦೫, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೪. ಶ್ರೀ ಕೃಷ್ಣಪ್ಪ, ಶ್ರೀ ಮೈಲಾರಲಿಂಗೇಶ್ವರ ದಿವ್ಯಚರಿತಾಮೃತ, ಪುಟ–೨೧೫, ಪ್ರಕಾಶನ ಅಪ್‌ಸೆಟ್ ಪ್ರಿಂಟರ್ಸ್, ದಾವಣಗೆರೆ, ೨೦೦೮

೫. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ–೧೭೪, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೬. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ–೪೨, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೭. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ–೫೫, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೮. ಶ್ರೀ ಕೃಷ್ಣಪ್ಪ, ಶ್ರೀ ಮೈಲಾರಲಿಂಗೇಶ್ವರ ದಿವ್ಯಚರಿತಾಮೃತ, ಪುಟ–೨೧೬, ಪ್ರಕಾಶನ ಅಪ್‌ಸೆಟ್ ಪ್ರಿಂಟರ್ಸ್, ದಾವಣಗೆರೆ, ೨೦೦೮

೯. ಕಲಾಭೂಷಣ ಯೋಗ ನರಸಿಂಹ, ಮೈಲಾರ ಜ್ಯೋತಿ ಮಹಾದರ್ಶನ, ಪುಟ–೧೩, ಪ್ರಕಾಶನ ಕಲರ್ ಸೆಡ್ಸ್, ಬೆಂಗಳೂರು, ೨೦೧೩

೧೦. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ–೩೪೫, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೧೧. ಕಲಾಭೂಷಣ ಯೋಗ ನರಸಿಂಹ, ಮೈಲಾರ ಜ್ಯೋತಿ ಮಹಾದರ್ಶನ, ಪುಟ–೧೫, ಪ್ರಕಾಶನ ಕಲರ್ ಸೆಡ್ಸ್, ಬೆಂಗಳೂರು, ೨೦೧೩

೧೨. ಕಲಾಭೂಷಣ ಯೋಗ ನರಸಿಂಹ, ಮೈಲಾರ ಜ್ಯೋತಿ ಮಹಾದರ್ಶನ, ಪುಟ–೧೬, ಪ್ರಕಾಶನ ಕಲರ್ ಸೆಡ್ಸ್, ಬೆಂಗಳೂರು, ೨೦೧೩

೧೩. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೩, ಪುಟ–೧೦೮, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೧೧

೧೪. ಕಲಾಭೂಷಣ ಯೋಗ ನರಸಿಂಹ, ಮೈಲಾರ ಜ್ಯೋತಿ ಮಹಾದರ್ಶನ, ಪುಟ-೧೭, ಪ್ರಕಾಶನ ಕಲರ್ ಸೆಡ್ಸ್, ಬೆಂಗಳೂರು, ೨೦೧೩

೧೫. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ-೨೫೫, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೧೬. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ-೬೦, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೧೭. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ-೬೩, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೧೮. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ-೬೪, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೧೯. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ-೭೩, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೨೦. ನೇಗಿನಹಾಳ ಎಂ.ಬಿ., ಮೈಲಾರ ಮತ್ತು ಖಂಡೋಬ, ಪುಟ-೬೫, ಕರ್ನಾಟಕ ವಿ.ವಿ. ಧಾರವಾಡ, ೧೯೯೨

೨೧. ಕೃಷ್ಣವೇಣಿ ಆರ್., ಹುಲಿಗೆಮ್ಮ, ಪುಟ-೩೦, ಅಂಬಾರಿ ಪ್ರಕಾಶನ, ಮೈಸೂರು, ೨೦೦೮

೨೨. ಕೃಷ್ಣವೇಣಿ ಆರ್., ಹುಲಿಗೆಮ್ಮ, ಪುಟ-೨೯, ಅಂಬಾರಿ ಪ್ರಕಾಶನ, ಮೈಸೂರು, ೨೦೦೮

೨೩. ಕೃಷ್ಣವೇಣಿ ಆರ್., ಹುಲಿಗೆಮ್ಮ, ಪುಟ-೧೫೯, ಅಂಬಾರಿ ಪ್ರಕಾಶನ, ಮೈಸೂರು, ೨೦೦೮

೨೪. ಕೃಷ್ಣವೇಣಿ ಆರ್., ಹುಲಿಗೆಮ್ಮ, ಪುಟ-೧೪೯, ಅಂಬಾರಿ ಪ್ರಕಾಶನ, ಮೈಸೂರು, ೨೦೦೮

೨೫. ಕೃಷ್ಣವೇಣಿ ಆರ್., ಹುಲಿಗೆಮ್ಮ, ಪುಟ-೪೯, ಅಂಬಾರಿ ಪ್ರಕಾಶನ, ಮೈಸೂರು, ೨೦೦೮

೨೬. ಕೃಷ್ಣವೇಣಿ ಆರ್., ಹುಲಿಗೆಮ್ಮ, ಪುಟ-೮೭, ಅಂಬಾರಿ ಪ್ರಕಾಶನ, ಮೈಸೂರು, ೨೦೦೮

೨೭. ತಳವಾರ ಮಹಾದೇವ, ಮಧ್ಯ ಕರ್ನಾಟಕದ ಗ್ರಾಮದೇವತೆಗಳ ಸಂಕಥನ, ಪುಟ-೧೩೭, ಕಲಾಪ್ರಕಶಾನ, ಬೆಂಗಳೂರು, ೨೦೧೦

೨೮. ತಳವಾರ ಮಹಾದೇವ, ಮಧ್ಯ ಕರ್ನಾಟಕದ ಗ್ರಾಮದೇವತೆಗಳ ಸಂಕಥನ, ಪುಟ-೧೫೯, ಕಲಾಪ್ರಕಶಾನ, ಬೆಂಗಳೂರು, ೨೦೧೦

೨೯. ತಳವಾರ ಮಹಾದೇವ, ಮಧ್ಯ ಕರ್ನಾಟಕದ ಗ್ರಾಮದೇವತೆಗಳ ಸಂಕಥನ, ಪುಟ-೧೪೩, ಕಲಾಪ್ರಕಶಾನ, ಬೆಂಗಳೂರು, ೨೦೧೦

೩೦. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೩೮೧, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೩೧. ಅದೇ ಪು–೪೯೨

೩೨. ಅದೇ ಪು–೨೬೫

೩೩. ಅದೇ ಪು–೪೨

೩೪. ಅದೇ ಪು–೧೫

೩೫. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೩, ಪುಟ–೪೫, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೧೧

೩೬. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೬, ಬೀರಪ್ಪ ಪರಂಪರೆ,, ಪುಟ–೨೪೨, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೧೫

೩೭. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೩, ಪುಟ–೪೬, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೧೫

೩೮. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೩೮೨, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ. ಹೊಸಪೇಟೆ, ೨೦೧೪

೩೯. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೪೬೦, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೪೦. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೯೭, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೪೧. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೩, ಪುಟ–೧೪೬, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೯

೪೨. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೧೩೭, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೪೩. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೪ ಕುರುಬರ ಕಲೆ–ಆಚರಣೆ–ಸಂಪ್ರದಾಯಗಳು, ಪುಟ–೨೩೬, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೧೩

೪೪. ಹಳ್ಳಿಕೇರಿ ಎಫ್.ಟಿ. (ಸಂ), ಹಾಲುಮತ ವ್ಯಾಸಂಗ–೬, ಬೀರಪ್ಪ ಪರಂಪರೆ,, ಪುಟ–೧೧೦, ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೧೫

೪೫. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೩೭೫, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೪೬. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೪೩, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೪೭. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೨೯೭, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೪೮. ಅನ್ನಪೂರ್ಣ ಗೋಸ್ಬಾಳ, ಹಾಲುಮತ ಕಿರಣ, ಪುಟ–೪೪, ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ

೪೯. ಶ್ರೀ ಕೃಷ್ಣಪ್ಪ, ಮೈಲಾರಲಿಂಗೇಶ್ವರ ದಿವ್ಯಚರಿತಾಮೃತ, ಪುಟ–೨೦೭, ಪ್ರಕಾಶನ ಅಪ್‌ಸೆಟ್ ಪ್ರಿಂಟರ್ಸ್, ದಾವಣಗೆರೆ, ೨೦೦೮

೫೦. ಅಂಗಡಿ ಎಸ್.ಎಸ್., ಕುರುಬರ ಸಮುದಾಯ ಭಾಷೆ, ಮಾನವ ಭಾಷಾಶಾಸ್ತ್ರ ಅಧ್ಯಯನ, ಪುಟ–೨೩೩, ಆನಂದಕಂದ ಗ್ರಂಥಮಾಲೆ, ಮಲ್ಲಾಡಿಹಳ್ಳಿ, ಚಿತ್ರದುರ್ಗ, ೨೦೦೯

೫೧. ಶ್ರೀ ಕೃಷ್ಣಪ್ಪ, ಮೈಲಾರಲಿಂಗೇಶ್ವರ ದಿವ್ಯಚರಿತಾಮೃತ, ಪುಟ–೨೨೭, ಪ್ರಕಾಶನ ಅಪ್‌ಸೆಟ್ ಪ್ರಿಂಟರ್ಸ್, ದಾವಣಗೆರೆ, ೨೦೦೮

೫೨. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೨೯೭, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೫೩. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೩೩೮, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೫೪. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೨೨೨, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೫೫. ಲಿಂಗಹಳ್ಳಿ ಹಾಲಪ್ಪ, ಹಾಲುಮತ ಸಾಂಸ್ಕೃತಿಕ ಪದಕೋಶ–ಸಂ–೧, ಪುಟ–೩೮೩, ಪ್ರಕಾಶನ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ, ೨೦೧೪

೫೬. ಕೃಷ್ಣವೇಣಿ ಆರ್., ಹುಲಿಗೆಮ್ಮ, ಪುಟ–೮೭, ಅಂಬಾರಿ ಪ್ರಕಾಶನ, ಮೈಸೂರು, ೨೦೦೮

೫೭. ಶ್ರೀ ಕೃಷ್ಣಪ್ಪ, ಮೈಲಾರಲಿಂಗೇಶ್ವರ ದಿವ್ಯಚರಿತಾಮೃತ, ಪುಟ–೨೦೫, ಪ್ರಕಾಶನ ಅಪ್‌ಸೆಟ್ ಪ್ರಿಂಟರ್ಸ್, ದಾವಣಗೆರೆ, ೨೦೦೮

# ಅಧ್ಯಾಯ – ನಾಲ್ಕು

## ಭಂಡಾರ: ಸಾಂಸ್ಕೃತಿಕ ಮಹತ್ವ

ಪ್ರಪಂಚದಲ್ಲಿ ಜೀವ ವಿಕಾಸದ ನಂತರ ಮನುಷ್ಯ ಎಂಬ ಪ್ರಾಣಿ ಇನ್ನಿತರ ಎಲ್ಲ ಪ್ರಾಣಿಗಳಿಗಿಂತ ಭಿನ್ನವಾಗಿರಲು ಅವನಿಗಿರುವ ಏಕೈಕ ಆಧಾರ 'ಸಂಸ್ಕೃತಿ' ಆಗಿದೆ. ಯಾವುದೇ ಒಂದು ನಿರ್ದಿಷ್ಟ ಜಾತಿ, ವರ್ಗ, ಧರ್ಮ ಶ್ರೇಷ್ಠವೆಂಬ ಕಲ್ಪನೆಯನ್ನು ಇತ್ತೀಚೆಗೆ ಕಾಣಬಹುದಾಗಿದೆ. ಯಾವುದೇ ಸಮಾಜದ ಒಬ್ಬ ಸದಸ್ಯನಾಗಿ ಗಳಿಸಿಕೊಂಡ ಜ್ಞಾನ, ಕಲೆ, ನಂಬಿಕೆ, ನೀತಿ–ನಿಯಮ ಆಚರಣೆ ಸ್ವಭಾವಗಳೊಳಗೊಂಡ ಸ್ಥಿತಿಯನ್ನು ನಾವು ಸಂಸ್ಕೃತಿಯೆಂದು ಕರೆಯುತ್ತೇವೆ. ಇಂತಹ ಮಾನವ ಸಂಸ್ಕೃತಿ ಬೆಳವಣಿಗೆಗೆ ಕಾರಣೀಭೂತವಾದ ಕುರುಬ ಜನಾಂಗದಸಂಸ್ಕೃತಿ ತಿಳಿಯುವಾಗ ಕುರುಬರ ಜನಾಂಗದ ಆಚಾರ–ವಿಚಾರ ನಂಬಿಕೊಂಡು ಬಂದ ದೇವರು ಪರಂಪರಾನುಗತವಾದ ಆಚರಣೆಗಳಲ್ಲಿರುವ ಸಂಸ್ಕಾರಗಳು ಅವರ ಉಡುಗೆ–ತೊಡುಗೆಗಳು ಇತ್ಯಾದಿ ಸಂಸ್ಕೃತಿಯ ಅನನ್ಯವಾಗಿ ಕಂಡು ಬರುತ್ತದೆ.

ಹಾಲುಮತಸ್ಥರ ಸಂಸ್ಕೃತಿಯು ವೀರಪರಂಪರೆಯಾದ ಮೈಲಾರಲಿಂಗೇಶ್ವರ, ಬೀರಪ್ಪ, ಮಾಳಿಂಗರಾಯ ಜಟ್ಟಿಂಗರಾಯ, ಇಟ್ಟಪ್ಪ, ಬುಳ್ಳಪ್ಪ ಮುಂತಾದ ವೀರ ಪರಂಪರೆಯಾಗಿದ್ದು ರೇವಣಸಿದ್ದೇಶ್ವರ, ಸಿದ್ಧರಾಮೇಶ್ವರ, ಅಮೋಘಸಿದ್ಧೇಶ್ವರ, ಶಾಂತಮುತ್ತಯ್ಯ, ಮರುಳಸಿದ್ದೇಶ, ಸಮುದಾಯವು ಗುರುಪರಂಪರೆಯಾಗಿದೆ. ಇವರ ಗುಡಿ–ಗುಂಡಾರಗಳಲ್ಲಿ ಮತ್ತು ಜಾತ್ರೆ ಉತ್ಸವಗಳಲ್ಲಿ ಬಹುತೇಕ ಭಂಡಾರ ಸಂಸ್ಕೃತಿಯನ್ನು ಕಾಣಬಹುದಾಗಿದೆ.

ಒಡೆಯರ ಸಂಪ್ರದಾಯದಲ್ಲಿ ರೇವಣಸಿದ್ದೇಶ್ವರ, ಸಿದ್ಧರಾಮೇಶ್ವರದ ಸಂಪ್ರದಾಯದ ಒಡೆಯರಲ್ಲಿ ಹಣೆಗೆ ವಿಭೂತಿಯನ್ನು ಧರಿಸಿಕೊಂಡರೇ, ಅಮೋಘಸಿದ್ಧ ಸಂಪ್ರದಾಯದ ಒಡೆಯರು ಭಂಡಾರವನ್ನು ಧರಿಸುತ್ತಾರೆ. ಇದರಲ್ಲಿ ವಿಭೂತಿ ಇದ್ದರೂ ಭಂಡಾರಕ್ಕೆ ಪ್ರಾಮುಖ್ಯತೆ ಇರುವುದು ಗಮನಿಸಬಹುದಾಗಿದೆ.

ಮೈಲಾರದ ಆದಿದೈವ ಮಲ್ಲಣ್ಣ ದ್ರಾವಿಡ ಮೂಲ ನಿವಾಸಿಗಳ ನಂಬಿಕೆಯ ಭಂಡಾರದ ಕುರುಹು ಆಗಿರುವುದು ದೇಶದ ಎಲ್ಲ ಮೈಲಾರನ ನೆಲೆಗಳಲ್ಲಿ ಭಂಡಾರಕ್ಕೆ ಪ್ರಥಮ ಪ್ರಾಶಸ್ತ್ಯವಿದೆ. ಅರಿಶಿನ ಇವನ ವೈಶಿಷ್ಟ್ಯ ಇವನ ಧ್ವಜದ ಬಣ್ಣವೂ ಇದೇ. ಇವನ ಪ್ರಸಾದವೆಂದು ಕೊಡುವ ಭಂಡಾರವು ಅರಿಶಿಣವೇ ಆಗಿದೆ. ಭಂಡಾರ ಹೊರತಾದ ಮೈಲಾರವಿಲ್ಲ. ಅರಿಶಿಣದಲ್ಲಿ ಔಷಧಿಯ ಗುಣವಿದೆಯೆಂದು ನಮ್ಮ ಮೂಲ ನಿವಾಸಿಗಳಿಗೆ ಮೊದಲೇ ತಿಳಿದ ಕಾರಣ ಮೈಲಾರ ಅಂದರೆ ಭಂಡಾರದ ಆಚರಣೆಗಳನ್ನು ಜಾರಿಗೆ ತರಲಾಗಿದೆ. ಹಾಲುಮತಸ್ಥರು ತಮ್ಮ ಭಂಡಾರ ಸಂಸ್ಕೃತಿಯನ್ನು ಬೆಳೆಸಿಕೊಂಡು ಬಂದಿದ್ದಾರೆ.

ಭಂಡಾರ ಸಂಸ್ಕೃತಿಯ ಮಹತ್ವಕ್ಕೆ ಅನುಗುಣವಾಗಿ ವಿಭಾಗಗಳಾಗಿ ವಿಂಗಡಿಸಲಾಗಿದೆ. ಅವು ಈ ಕೆಳಗಿನಂತಿವೆ.

೧. ಭಂಡಾರದ ಉಪಯೋಗಗಳು

೨. ಶುಭಕಾರ್ಯದಲ್ಲಿ ಭಂಡಾರ ಮಹತ್ವ

೩. ಗೋರವಯ್ಯರ ವೇಷಭೂಷಣದಲ್ಲಿ ಭಂಡಾರದ ಮಹತ್ವ

೪. ವಿಧಿ-ನಿಷಿಧಗಳಲ್ಲಿ ಭಂಡಾರ ಮಹತ್ವ

ಇವುಗಳ ವಿವರಗಳನ್ನು ಈ ಕೆಳಗಿನಂತೆ ಸಂಕ್ಷಿಪ್ತತವಾಗಿ ವಿವರಿಸಲಾಗಿದೆ.

**೧. ಭಂಡಾರದ ಉಪಯೋಗ :**

ಪಶುಪಾಲಕರಾದ ಕುರುಬರು ಸೂರ್ಯ, ಚಂದ್ರ, ಹಾಲು-ನೀರು, ಭಂಡಾರ-ಬೇವು, ಕುರಿ-ದನ, ಗಿಡ-ಮರ ಇತ್ಯಾದಿಗಳನ್ನು ಭಕ್ತಿಯಿಂದ ಪೂಜಿಸುವರು. ಭಂಡಾರ ಸಂಪ್ರದಾಯದ ಮೈಲಾರ, ಎಲ್ಲಮ್ಮ ಭಂಡಾರ ಸಂಸ್ಕೃತಿಯ ಕಕ್ಷೆಯಲ್ಲಿದ್ದಾರೆ. ಇವರ ಜಾತ್ರೆಯಲ್ಲಿ ಮತ್ತು ಉತ್ಸವಗಳಲ್ಲಿ ಭಂಡಾರದ ಪಾತ್ರ ಬಹಳ ಮಹತ್ವಪೂರ್ಣವಾಗಿದೆ. ಕಾಯಿಲೆಯಾದ ಹಾಲುಮತ ದೈವಗಳ ಗುಡಿಗೆಹೋಗಿ ಭಂಡಾರ ಹಚ್ಚಿಕೊಂಡರೆ ಕಾಯಿಲೆ ವಾಸಿಯಾಗುತ್ತದೆಂಬ ನಂಬಿಕೆಯಾಗಿದೆ.

ಭಂಡಾರವನ್ನು ಅರಿಶಿಣ ಸಸ್ಯದಿಂದ ತಯಾರಿಸಲ್ಪಟ್ಟಿದ್ದು ಅದರಲ್ಲಿ ರೋಗ ನಿವಾರಣೆ ಶಕ್ತಿಯಿರುವುದು. ವೈಜ್ಞಾನಿಕವಾಗಿ ಗೊತ್ತಿರುವ ಅಂಶವಾಗಿದೆ. ಕುರುಬರು ಬಹುಹಿಂದೆಯೇ ಔಷಧಿಯ ಗುಣಗಳನ್ನು ಭಂಡಾರ-ಬೇವುಗಳಲ್ಲಿ ಪತ್ತೆ ಹಚ್ಚಿ ಇವುಗಳಿಗೆ ಸ್ವರೂಪ ನೀಡಿ ಪೂಜಿಸಲಾರಂಭಿಸಿದರು. ಇಂದಿನ ಕಾಲದಲ್ಲಿ ಒಂದೊಂದು ರೋಗಕ್ಕೆ ಒಬ್ಬೊಬ್ಬ ವಿಶೇಷ ವೈದ್ಯನಿರುವಂತೆ ಹಿಂದೆ ಈ ಕಾರ್ಯವನ್ನು ಶಕ್ತಿ ದೇವತೆಗಳು ಮಾಡುತ್ತಿದ್ದವು.

"ಬೇವು-ಭಂಡಾರಗಳ ಪ್ರತೀಕವೇ ಎಲ್ಲಮ್ಮ, ಜಂಬಲಮ್ಮ, ಸುಂಕಲಮ್ಮ, ದುರ್ಗಮ್ಮ, ಚೌಡಮ್ಮ, ಲಕ್ಷ್ಮೀ, ಮಹಾಕಾಳಿ, ಮಸಣಮ್ಮ, ಮಾರಮ್ಮ ಇತ್ಯಾದಿ ಸ್ತ್ರೀ ದೈವಗಳು ಪುರುಷ ದೈವಗಳಾದ ಮೈಲಾರಲಿಂಗ, ಖಂಡೋಬ, ಬೀರಪ್ಪರನ್ನು ಇದೆ ನೆಲೆಯಲ್ಲಿ ಹುಟ್ಟುಹಾಕಿದ್ದಾರೆ. ಬೇವು-ಭಂಡಾರ ದೈವಗಳು ಕುರುಬರ ರಕ್ಷಾ ಕವಚಗಳಾಗಿವೆ"[೧] ಎಂಬ ಹೇಳಿಕೆಯು ಭಂಡಾರ ಸಂಸ್ಕೃತಿಯ ಮಹತ್ವವನ್ನು ತಿಳಿಸುವಲ್ಲಿ ಪ್ರಮುಖವಾದುದ್ದಾಗಿದೆ.

ಉದಾ: ಸಿಡುಬಮ್ಮನ ಹೆಸರು ಹೇಳಿ ಸಿಡುಬು ರೋಗಕ್ಕೆ ಬೇವಿನ ಸೊಪ್ಪನ್ನು ಅರೆದು ಭಂಡಾರ (ಅರಿಶಿಣ)ದಲ್ಲಿ ಕಲಿಸಿ ಅಮ್ಮನ ಹೆಸರು ಹೇಳಿ ಹಚ್ಚಿಕೊಂಡರೆ ಸಿಡುಬು ಹೋಗುತ್ತದೆ ಎಂಬ ನಂಬಿಕೆ.

**ಕುಷ್ಟ ರೋಗ ನಿವಾರಣೆ :**

ಇಲ್ಲಿ ನೋಡುವುದಾದರೆ "ಎಲ್ಲಮ್ಮನ ಕಥೆಯಲ್ಲಿ ಅವಳ ಕುಷ್ಟರೋಗ ಪರಿಹರಿಸುವ ಮೂಲಕ ವೈದ್ಯ ಪದ್ಧತಿ ತಿಳಿದಿರುವ ಅಂದು ಬಳಸಿದ್ದ ಭಂಡಾರ ಬೇವಿನ ಎಲೆ"[೨] ಮಹತ್ವವಾಗಿದೆ. ಒಟ್ಟಿನಲ್ಲಿ, ಅಮ್ಮನ ಸಂಪ್ರದಾಯ ಅಂದರೆ ಎಲ್ಲಮ ಅಥವಾ ಹುಲಿಗೆಮ್ಮ ಸಂಪ್ರದಾಯದಲ್ಲಿ ಬೇವಿನ ಮರದ ಎಲೆ, ಭಂಡಾರ ಮತ್ತು ಬೇವಿನ ಎಲೆಗಳು ನಾಥ ಪಂಥದ ಕೊಡುಗೆಯಾಗಿದೆ ಎಂದು ಹೇಳಬಹುದಾಗಿದೆ. ಪ್ರಾಕೃತಿಕವಾದ ವಸ್ತುಗಳು ದೇವತೆಗಳಿಗೆ ಪ್ರಿಯವಾಗಿ ಧರಿಸುವುದಲ್ಲದೆ ತಮ್ಮ ಭಕ್ತರಿಗೂ ಬೇವಿನ ಎಲೆ ಉಡುಗೆಯಾಗಿ ತೊಡಿಸಿ ಭಂಡಾರಹಚ್ಚಿ ಅವರ ರೋಗ ರುಜಿನ ಸಂಕಟಗಳನ್ನು ಕಳೆಯುತ್ತಾ ಪ್ರಕೃತಿಯಿಂದಲೇ ಪರಿಹಾರಗಳನ್ನು ಸೂಚಿಸುತ್ತವೆ ಎಂದೆನಿಸುತ್ತದೆ.

ಇನ್ನೂ ಋತುಮತಿಯಾದಾಗ ಹುಡುಗಿಗೆ ೫ ಅಥವಾ ೧೫ ದಿನಗಳವರೆಗೆ ಅರಿಶಿಣ ಹಾಗೂ ಎಣ್ಣೆಯನ್ನು ಹಚ್ಚಿ, ಸ್ನಾನ ಮಾಡಿಸುತ್ತಾರೆ. ಇದನ್ನು ವೈದ್ಯಕೀಯ ಹಿನ್ನೆಲೆಯಲ್ಲಿ ನೋಡುವುದಾದರೆ ತಲೆಗೆ ಎಣ್ಣೆ ತಂಪು ನೀಡುತ್ತದೆಯೆಂದು ಮತ್ತು ಅರಿಶಿಣ ಹಚ್ಚುವುದರಿಂದ ಯಾವುದೇ ತರಹದ ಮೊಡವೆಗಳು ಕಲೆಗಳು ಬರುವುದನ್ನು ತಡೆಗಟ್ಟಿ ಮುಖಕ್ಕೆ ಕಾಂತಿಯನ್ನು ಹೆಚ್ಚಿಸುತ್ತದೆಂದು ಅರಿಶಿಣವನ್ನು ಹಚ್ಚಿಸ್ನಾನ ಮಾಡಿಸುತ್ತಾರೆ.

ಒಟ್ಟಾರೆ, ಭಂಡಾರವೆಂದರೆ ಕೇವಲ ಅರಿಶಿಣಪುಡಿ ಅಲ್ಲ. ಅದರ ಹಿಂದೆ ಸಾಂಸ್ಕೃತಿಕ ಅನನ್ಯತೆ ಅಡಗಿದೆ. ಇದನ್ನು ರೋಗ ನಿರೋಧಕವಾಗಿ ಜನರು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದಾರೆ. ಜ್ವರ, ಶೀತ, ನೆಗಡಿ, ಇಂತಹ ಸಣ್ಣಪುಟ್ಟ ಕಾಯಿಲೆಗಳಲ್ಲದೇ ದೊಡ್ಡ ಪ್ರಮಾಣದ ಕಾಯಿಲೆಗಳು ವಾಸಿಯಾಗುವುದಕ್ಕೂ ಬಳಸುತ್ತಾರೆ. ಇದನ್ನು ಬಳಸುವಾಗ ಇಷ್ಟ ದೈವಗಳ ಪ್ರಸಾದ ಎಂಬ ನಂಬಿಕೆಯಿಂದ ಭಂಡಾರ ಸ್ವೀಕರಿಸುತ್ತಾರೆ. ಮನುಷ್ಯನ ದೈಹಿಕ ಆರೋಗ್ಯದ ದೃಷ್ಟಿಯಿಂದ

ದೇವರನ್ನು ಹುಟ್ಟುಹಾಕಿದ ಪ್ರಮಥರಾದ ಕುರುಬರ ಇತ್ತೀಚಿನ ಸಂತತಿಯು ಇದನ್ನು ಅರಿಯದೇ ಈ ದೈವಗಳನ್ನು ವೈದಿಕೀಕರಣದತ್ತ ಕೊಂಡೊಯ್ಯುತ್ತಿರುವುದು ಆತಂಕದ! ವಿಷಯವಾಗಿದೆ.

**ಶುಭಕಾರ್ಯದಲ್ಲಿ ಭಂಡಾರ ಸಂಸ್ಕೃತಿ :**

ಮೈಲಾರ ದೇವರ ಭಕ್ತರಲ್ಲದೆ ಇತರರೂ ಭಂಡಾರ ಅಥವಾ ಅರಿಶಿಣವನ್ನು ಬಳಸುವುದು ಸಾರ್ವತ್ರಿಕವಾದ ವಿಚಾರವಾಗಿದೆ. ಜನನ, ಮದುವೆ ಮುಂತಾದ ಮಂಗಳ ಕಾರ್ಯಗಳಲ್ಲಿ ಭಂಡಾರ ಉಪಯೋಗ ಸಾಮಾನ್ಯವಾಗಿರುತ್ತದೆ. ಇದು ಭಾರತೀಯ ಮಟ್ಟದಲ್ಲಿಯೂ ಮಾನ್ಯತೆ ಪಡೆದಿದೆ. ದಕ್ಷಿಣ ಭಾರತದ ತುಂಬ ಸ್ತ್ರೀಯರು ಸೌಂದರ್ಯ ಪ್ರಧಾನವಾಗಿ ಅರಿಶಿನ ಬಳಸುವರು.

ಕನ್ಯಾನ್ವೇಷಣೆ ಸಮಯದಲ್ಲಿ ಕನ್ಯೆಯನ್ನು ನೋಡಲು ಬಂದ ಗಂಡಿನ ಕಡೆಯವರು ಹೆಣ್ಣು ಮಕ್ಕಳು ತಾವು ತಂದಿರುವ ಅರಿಶಿಣ ಕುಂಕುಮ ಬಾಳೆಹಣ್ಣು, ಸಕ್ಕರೆ, ಎಲೆ, ಅಡಿಕೆ ಹೂವನ್ನು ಅವಳ ಉಡಿಯಲ್ಲಿ ಇಡುತ್ತಾರೆ. ಅರಿಶಿಣ, ಕುಂಕುಮ ಮುತ್ತೈದೆಯವರ ಸಂಕೇತವಾಗಿದೆ.

ಮದುವೆ ಸಮಯದಲ್ಲಿ ನೋಡುವುದಾದರೆಅರಿಶಿಣದ ಸಂಬಂಧಿಯಾದ ಕಾರ್ಯಕ್ರಮಗಳು ಜರುಗುತ್ತವೆ. ಇದಕ್ಕೆ ಅರಿಶಿಣ ಕಾರ್ಯಕ್ರಮ ಎನ್ನಲಾಗುತ್ತದೆ. "ಉತ್ತರ ಕರ್ನಾಟಕದ ಕುರುಬರು ತಮ್ಮ ಮನೆಯ ಮದುವೆಯನ್ನು ಮೂರು ದಿನಗಳ ಕಾಲ ನಡೆಸುತ್ತಾರೆ. ಮೊದಲ ದಿನ ಮನೆದೇವರ ಸೇವೆ ನಂತರ ಎರಡನೆಯ ದಿನ ಅರಿಶಿಣದ ಕಾರ್ಯಕ್ರಮ ನಡೆಯುತ್ತದೆ. ಗಂಡು ಮತ್ತು ಹೆಣ್ಣಿನ ಮನೆಯಲ್ಲಿ ಪ್ರತ್ಯೇಕವಾಗಿ ಮದುವೆಯಾಗಲಿರುವ ಗಂಡು–ಹೆಣ್ಣನ್ನು ಮಣೆಯಮೇಲೆ ಕೂಡ್ರಿಸಿ ಮುತ್ತೈದೆಯರು ಅರಿಶಿಣ ಹಚ್ಚಿ ಆರತಿ ಮಾಡುತ್ತಾರೆ"[೩] ಈ ರೀತಿಯಾಗಿ ಅರಿಶಿಣದ ಕಾರ್ಯಕ್ರಮವನ್ನು ಮದುವೆ ಸಂದರ್ಭದಲ್ಲಿ ನಡೆಸುತ್ತಾರೆ. "ಇನ್ನೂ ಕೆಲವು ಪಂಗಡಗಳಲ್ಲಿ ಅಥವಾ ಆರ್ಥಿಕವಾಗಿ ಹಿಂದುಳಿದ ಸಂದರ್ಭದಲ್ಲಿ ತಾಳಿಯನ್ನು ತರಲು ಆಗದೇ ಇರುವ ಸಂದರ್ಭದಲ್ಲಿ ವಧುವಿನ ಕೊರಳಿಗೆ ಅರಿಶಿಣ ಕೊಂಬನ್ನು ಕಟ್ಟುವ ಸಂಪ್ರದಾಯವಿದೆ"[೪] ಎಂಬ ಹೇಳಿಕೆಯನ್ನು ಮೈಲಾರ ಮತ್ತು ಖಂಡೋಬ ಕೃತಿಯಲ್ಲಿ ಡಾ. ಎಂ.ಬಿ. ನೇಗಿನಹಾಳ ಅವರು ವ್ಯಕ್ತಪಡಿಸಿದ್ದಾರೆ.

ಅಕ್ಷತೆ ಸಂಪ್ರದಾಯದಲ್ಲಿ ಹಾಲುಮತ ಸಮುದಾಯದ ಭಂಡಾರ ಸಂಪ್ರದಾಯದಂತೆ ಅಕ್ಕಿ ಕಾಳಿಗೂ ಮಹತ್ವದ ಸ್ಥಾನವಿದೆ. "ಮದುವೆಯಲ್ಲಿ ಅಕ್ಕಿಕಾಳನ್ನು ಅರಿಶಿಣ–ಕುಂಕುಮದಲ್ಲಿ ಬೆರೆಸಿ ವಧುವರರ ತಲೆಯಮೇಲೆ ಅರಿಶಿಣದ ಅಕ್ಷತೆಯನ್ನು ಹಾಕುವ ಸಂಪ್ರದಾಯವಿದೆ. ಒಟ್ಟಾರೆ ಅರಿಶಿಣ ಬೆರೆಸಿದ ಅಕ್ಕಿಕಾಳನ್ನು ಹಾಕುವುದೆಂದರೆ ಮದುವೆ ಮಾಡುವುದು ಎಂಬ ಅರ್ಥವಿದೆ.

ಇನ್ನೂ ಮೈಲಾರ ದೇವರ ಸಂಪ್ರದಾಯದಲ್ಲಿ ಅಕ್ಕಿಕಾಳನ್ನು ಹಾಕುವುದು ಒಂದು ವಿಶಿಷ್ಟವಾದ ಆಚರಣೆಯಾಗಿದ್ದು ಪವಿತ್ರ ಸ್ಥಾನ ಪಡೆದಿದೆ. ಅಲ್ಲದೇ ಮೈಲಾರನ ಉತ್ಸವ ಸಮಯದಲ್ಲಿ

ಎಳ್ಳಾರ್ಥಿ ಗ್ರಾಮ ಮತ್ತು ಇತರೆ ಗ್ರಾಮಗಳ ಜನರು ಪಲ್ಲಕ್ಕಿ ಮುಂದೆ ತಟ್ಟೆಯಲ್ಲಿರುವ ಅರಿಶಿಣದ ಅಕ್ಕಿಯನ್ನು ಉತ್ಸವ ಮೂರ್ತಿಯ ಮೇಲೆ ಜನರು ಹಾಕುತ್ತಾರೆ"[೫] ಎಂದು ಲಿಂಗದಹಳ್ಳಿ ಹಾಲಪ್ಪ ಅವರು ಹೇಳುತ್ತಾರೆ.

ಕೆಲವು ಸಮಯದಲ್ಲಿ ಬಾಗಿನದಂಥ ಮಾಂಗಲ್ಯವಸ್ತು, ಪ್ರಧಾನವಾದ ಕಾರ್ಯಕ್ರಮದಲ್ಲಿ ಇತರ ಪರಿಕರಗಳ ಜೊತೆಗೆ ಅರಿಶಿಣ ಕೊಂಬುಕೂಡ ಇದ್ದೇ ಇರುತ್ತದೆ. ಇನ್ನೂ ಮಕ್ಕಳಾಗದ ಹೆಂಗಸಿಗೆ ಮರಿಸಹಿತವಾದ ಕೊಂಬನ್ನು ಬಳಿಸಿ ಉಡಿತುಂಬುವುದು ಎಲ್ಲೆಡೆ ಪ್ರಚಲಿತವಾದ ಸಂಪ್ರದಾಯವಾಗಿದೆ. ಈ ರೀತಿಯಾಗಿ ಶುಭಕಾರ್ಯದಲ್ಲಿ ಭಂಡಾರದ ಅಥವಾ ಅರಿಶಿಣದ ಮಹತ್ವದ ಸ್ಥಾನ ಪಡೆದು ತನ್ನ ವೈಶಿಷ್ಟ್ಯತೆಯನ್ನು ಕಾಪಾಡಿಕೊಂಡುಬಂದಿದೆ.

**ಗೊರವರ ವೇಷ ಭೂಷಣ :**

ಗೊರವರ ವೇಷಭೂಷಣಗಳಲ್ಲಿ ಭಂಡಾರದ ಮಹತ್ವ ಕಾಣಬಹುದಾಗಿದೆ. "ಗೊರವರು ಕಂಬಳಿಯ ಉದ್ದನೆಯ ನಿಲುವಂಗಿ ತಲೆಯಮೇಲೆ ಕರಡಿಯ ಚರ್ಮದ ಉದ್ದನೆಯ ಟೋಪಿ, ಕೊರಳಲ್ಲಿ ಕವಡೆಸರ ಎದೆಯ ಮೇಲೆ ಅಡ್ಡಲಾಗಿ ಪೋಣಿಸಿದ ಬಟ್ಟೆಗೆ ಹೊಲಿದು ತಯಾರಿಸಿದ ಕವಡೆಯ ಪಟ್ಟೆ, ಹಣೆಯಲ್ಲಿ ವಿಭೂತಿ ಪಟ್ಟೆ, ಕಣ್ಣಹುಬ್ಬು ಕೆಂಪು ಬಣ್ಣದ ಲೇಪನ ಹಣೆಯ ತುಂಬಾ ಭಂಡಾರ ಮಧ್ಯಮಧ್ಯ ಚಿಕ್ಕ ಚಿಕ್ಕ ಚುಕ್ಕೆ, ಬೊಟ್ಟು ಬಲಗೈಲಿ ಡಮರುಗ ಎಡ ಬಗಲಿಗೆ ಜೋಳಿಗೆ ಭಂಡಾರ ಚೀಲ ಸೋಂಟಕ್ಕೆ ಕವಡೆಸರ"[೬] ಇತ್ಯಾದಿ ಗೊರವರ ವೇಷಭೂಷಣಗಳಿವೆ ಎಂದು ಚಿಕ್ಕಣ್ಣ ಯಣ್ಣೆಕಟ್ಟೆಯವರು 'ಗೊರವರ ಕುಣಿತ'ದಲ್ಲಿ ಉಲ್ಲೇಖಿಸಿದ್ದಾರೆ.

ಹಾಲುಮತ ಸಮಾಜದಲ್ಲಿ ವಗ್ಗಯ್ಯ ಗೋರಪ್ಪ ಅಥವಾ ಭಿಂಗಯ್ಯನವರಿಗೆ ಭಂಡಾರಯ್ಯ ಎನ್ನಲಾಗುತ್ತದೆ. ಇವರ ಹತ್ತಿರವಿರುವ ಚೀಲದಲ್ಲಿ ಭಂಡಾರವಿರುತ್ತದೆ. ಹೀಗೆ ಗೋರವಯ್ಯರ ವೇಷಭೂಷಣಗಳಲ್ಲಿ ಭಂಡಾರ ಸಂಸ್ಕೃತಿಯ ಮಹತ್ವ ಕಾಣಬಹುದಾಗಿದೆ.

**ವಿಧಿ-ನಿಷೇಧಗಳು :**

ಹಾಲುಮತಸ್ಥರು ಭಂಡಾರದ ದೈವಗಳಲ್ಲಿ ವಿಧಿ-ನಿಷೇಧಗಳನ್ನು ಅಳವಡಿಸಿಕೊಂಡಿದ್ದಾರೆ. "ಛಟ್ಟಿ ಭಂಡಾರ ತಯಾರಿಸುವ ಮೊದಲು ದೇವರಿಗೆ ಅರ್ಪಿಸಿದ ಭಂಡಾರ ಒಡೆದು ಉದ್ಘಾಟಿಸುವವರೆಗೆ ಯಾರು ಯಾರಿಗೂ ಭಂಡಾರವನ್ನು ಕೊಡುವುದಿಲ್ಲ ಮತ್ತು ಧರಿಸುವುದಿಲ್ಲ"[೭]. ಅವರಂತೆ ಉಳಿದ ಗೊರವರು ಮತ್ತು ಭಕ್ತ ವೃಂದವು ಭಂಡಾರ ಧರಿಸುವುದಿಲ್ಲ. ಭಂಡಾರ ಒಡೆದ ನಂತರ ಎಲ್ಲರೂ ಪರಸ್ಪರವಾಗಿ ಒಬ್ಬರು ಮತ್ತೊಬ್ಬರು ಭಂಡಾರವನ್ನು ಹಚ್ಚಿಕೊಳ್ಳುತ್ತಾರೆ. ಅಂದಿನ ಭಂಡಾರವೇ ಮುಂದಿನ ಛಟ್ಟಿಯ ಆಚರಣೆಯವರೆಗೂ ಬಳಕೆಯಾಗುತ್ತವೆ ಮತ್ತು ಒಡೆಯರು, ಗೋರವರು ಇದನ್ನೇ ಮುಂದಿನ ವರ್ಷದವರೆಗೂ ಬಳಸುತ್ತಾರೆ.

“ಹುಲಿಗೆಮ್ಮ, ಅಣ್ಣನಾದ ಮೈಲಾರಲಿಂಗನ ಭಂಡಾರವನ್ನು ಕದ್ದು ಬಂದಿರುವುದರಿಂದ ಮೈಲಾರಲಿಂಗನ ಭಕ್ತರಾದ ಕುರುಬರು ಈಕೆಯ ಜಾತ್ರೆಗೆ ಬರುವಂತಿಲ್ಲ. ಕುರುಬರಲ್ಲಿ ಅದರಲ್ಲೂ ಕಳ್ಳ ಒಕ್ಕಲದವರು ಎಂದಿಗೂ ಈ ದೇವಿ ಜಾತ್ರೆಗೆ ಬರುವುದಿಲ್ಲ”[೮] ಎಂದು ಕೃಷ್ಣವೇಣಿಯವರು ತಿಳಿಸಿದ್ದಾರೆ.

ಒಟ್ಟಾರೆ ಭಂಡಾರ ಸಂಸ್ಕೃತಿ ಕರ್ನಾಟಕದ ಪ್ರಾಚೀನ ಧಾರ್ಮಿಕ ಸಂಪ್ರದಾಯಗಳಲ್ಲಿ ಒಂದು ಇದು ಇಂದಿಗೂ ಜೀವಂತವಾಗಿ ಪ್ರಚಲಿತವಿದ್ದು ಹಲವು ಸಂಕೀರ್ಣ ಆಚರಣೆಗಳಿಂದಾಗಿ ತನ್ನ ‘ಅನನ್ಯತೆ’ ಹಾಗೂ ವಿಶಿಷ್ಟತೆಗಳನ್ನು ಉಳಿಸಿಕೊಂಡಿರುವುದು, ಆಂಧ್ರ, ಕರ್ನಾಟಕ, ಮಹಾರಾಷ್ಟ್ರ ಮುಂತಾದ ರಾಜ್ಯಗಳಲ್ಲಿ ವ್ಯಾಪಕವಾಗಿ ಭಂಡಾರ ಸಂಸ್ಕೃತಿ ಹರಡಿಕೊಂಡಿರುವುದು ಅಲ್ಲದೇ ಅದು ಒಂದು ಸಾಂಸ್ಕೃತಿಕ ಚೌಕಟ್ಟು ಹೊಂದಿದೆ. ಇದೊಂದು ಜಾತಿ ಚೌಕಟ್ಟನ್ನು ಮೀರಿ ಬೆಳೆದ ಸಂಪ್ರದಾಯವಾಗಿದೆ.

## ಕೊನೆ ಟಿಪ್ಪಣಿಗಳು

೧. ಹಾಲುಮತ ಸಾಂಸ್ಕೃತಿಕ ಪದಕೋಶ, ಡಾ.ಲಿಂಗದಹಳ್ಳಿ ಹಾಲಪ್ಪ, ಪುಟ.೩೬೮, ಪ್ರಕಾಶಕರು, ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ೨೦೧೪

೨. ಹುಲಿಗೆಮ್ಮ, ಕೃಷ್ಣವೇಣಿ ಆರ್, ಪುಟ.೫೬

೩. ಹಾಲುಮತ ಸಾಂಸ್ಕೃತಿಕ ಪದಕೋಶ ಡಾ.ಲಿಂಗದಹಳ್ಳಿ ಹಾಲಪ್ಪ, ಪುಟ.೬, ಪ್ರಕಾಶಕರು ಹಾಲುಮತ ಸಂಸ್ಕೃತಿ ಸಂಶೋಧನೆ ಪ್ರತಿಷ್ಠಾನ, ೨೦೧೪

೪. ಮೈಲಾರ ಮತ್ತು ಖಂಡೋಬ, ಡಾ.ಎಂ.ಬಿ.ನೇಗಿನಹಾಳ, ಪುಟ.೨೬೮.

೫. ಹಾಲುಮತ ಸಾಂಸ್ಕೃತಿಕ ಪದಕೋಶ, ಡಾ.ಲಿಂಗದಹಳ್ಳಿ ಹಾಲಪ್ಪ, ಪುಟ.೭, ಪ್ರಕಾಶಕರು, ಹಾಲುಮತ ಸಂಸ್ಕೃತಿ ಸಂಶೋಧನೆ ಪ್ರತಿಷ್ಠಾನ, ೨೦೧೪

೬. ಹಾಲುಮತ ವ್ಯಾಸಂಗ-೪, ಕುರುಬರ ಕಲೆ-ಆಚರಣೆ-ಸಂಪ್ರದಾಯಗಳು, ಡಾ.ಎಫ್.ಟಿ.ಹಳ್ಳಿಕೇರಿ, ಪುಟ.೫೫, ಪ್ರಸಾರಾಂಗ, ಕವಿವಿ, ಹಂಪಿ, ೨೦೧೩

೭. ಮೈಲಾರ ಜ್ಯೋತಿ ಮಹಾದರ್ಶನ, ಕಲಾಭೂಷಣ ಯೋಗನರಸಿಂಹ, ಪುಟ.೧೭

೮. ಹುಲಿಗೆಮ್ಮ, ಕೃಷ್ಣವೇಣಿ ಆರ್, ಪುಟ.೫೬, ಅಂಬಾರಿ ಪ್ರಕಾಶನ, ಮೈಸೂರು, ೨೦೦೪

## ಅಧ್ಯಾಯ – ಐದು

# ಸಮಾರೋಪ

ಕರ್ನಾಟಕದಲ್ಲಿ ಹಾಲುಮತ ಸಮುದಾಯದ ಸಾಂಸ್ಕೃತಿಕ ಕೊಡುಗೆ ಅತ್ಯಂತ ಅಮೂಲ್ಯವಾದುದಾಗಿದೆ. ಇವರು ತಮ್ಮ ಸಂಸ್ಕೃತಿಯನ್ನು ಭಂಡಾರದ ಮೂಲಕ ಶ್ರೀಮಂತಗೊಳಿಸಿದ್ದಾರೆ. ಹಾಲುಮತ ದೇವರುಗಳ ಭಂಡಾರ ಅಂಗಾರವಿದ್ದಂತೆ, ಹಣೆಗೆ ಧರಿಸುವುದು ಅರಿಷಿಣ ಪುಡಿ ಆದರೂ ಭಂಡಾರ ಬಂಗಾರದಷ್ಟೇ ಬೆಲೆ, ಭಂಡಾರ ದೇವರ ಪ್ರತಿರೂಪವಿದ್ದಂತೆ ಇದನ್ನು ಧರಿಸಿ ಸತ್ಯವನ್ನೇ ಹೇಳಬೇಕು, ಸುಳ್ಳು ಆಡುವಂತಿಲ್ಲ ಎಂಬ ಅವರ ಭಾವನೆಯು ಸತ್ಯದ ಪ್ರತೀಕ ಭಂಡಾರವಾಗಿದೆ ಎಂಬುದನ್ನು ಕಾಣಬಹುದಾಗಿದೆ. ಭಂಡಾರ ಜನಪದರ ಜೀವನದಲ್ಲಿ ಭಂಡಾರ ಕೇವಲ ಭೌತಿಕ ವಸ್ತುವಲ್ಲ, ಜನಪದರ ಸಾಮಾಜಿಕ, ಧಾರ್ಮಿಕ ನಡವಳಿಕೆಗಳಲ್ಲಿ ಇದಕ್ಕೊಂದು ಭಾವನಾತ್ಮಕ ಸಂಬಂಧವಿರುವುದರಿಂದ ಭಂಡಾರವನ್ನು ಸಾಂಸ್ಕೃತಿಕ ಹಿನ್ನಲೆಯಲ್ಲಿ ವಿಶ್ಲೇಷಿಸುವುದು ಅಧ್ಯಯನದ ಉದ್ದೇಶವಾಗಿದೆ. ಈ ಪ್ರಬಂಧದಲ್ಲಿ 'ಭಂಡಾರ'ದ ಸಾಂಸ್ಕೃತಿಕ ಅನನ್ಯತೆಯ ಬಗ್ಗೆ ಸಾಧ್ಯವಾದಷ್ಟು ವಿವರಿಸಲಾಗಿದೆ. ಭಂಡಾರ ಸಂಸ್ಕೃತಿಗೆ ಕಾಲ ಪ್ರದೇಶ, ವ್ಯಾಪ್ತಿ ಇಲ್ಲದಿದ್ದರೂ ಅಧ್ಯಯನ ದೃಷ್ಟಿಯಿಂದ ಅನುಕೂಲಕ್ಕೆ ತಕ್ಕಷ್ಟು ಭಂಡಾರದ ವಿವರಣೆಯನ್ನು ಚರ್ಚಿಸಲಾಗಿದೆ. ಭಂಡಾರದ ಬಗ್ಗೆ ಮೊದಲ ಅಧ್ಯಯನವಾದ ಉದ್ದೇಶ–ಸ್ವರೂಪ–ವ್ಯಾಪ್ತಿ ಎಂಬ ಅನುಕ್ರಮದಲ್ಲಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಭಂಡಾರದ ಅರ್ಥ–ವ್ಯಾಖ್ಯೆಗಳನ್ನು ಹೇಳಿ ತರುವಾಯ ಪುರಾಣ, ಐತಿಹಾಸಿಕ ಜನಪದ ಸಾಹಿತ್ಯ ಈ ಮೂರು ಹಂತದಲ್ಲಿ ಬೇರೆ–ಬೇರೆ ಗ್ರಂಥಗಳಲ್ಲಿ ಭಂಡಾರದ ಉಲ್ಲೇಖಗೊಂಡಿರುವ ಬಗೆಯನ್ನು ಹೇಳಲಾಗಿದೆ. ಇವುಗಳ ಮುಖಾಂತರ ಪೌರಾಣಿಕ ಮಹತ್ವ, ಐತಿಹಾಸಿಕ ಪ್ರಾಚೀನತೆಯ ಜೊತೆಗೆ ಜನಪದ ಸಾಹಿತ್ಯದ ಮೂಲಕ ಭಂಡಾರದ ಪ್ರಾಮುಖ್ಯತೆಯನ್ನು ಅರ್ಥೈಸಲಾಗಿದೆ.

ಭಂಡಾರವು ಅನನ್ಯತೆಯನ್ನು ಬಿಂಬಿಸುವ ಸಂಕೀರ್ಣವಾದದ್ದಾಗಿದೆ. ಭಂಡಾರದ ಸಂಪ್ರದಾಯವು ಕರ್ನಾಟಕದ ಅತ್ಯಂತ ಪ್ರಾಚೀನ ಸಂಪ್ರದಾಯಗಳಲ್ಲಿ ಒಂದು, ಭಂಡಾರ ಮೌಖಿಕ ಹಾಗೂ ಆಚರಣಾತ್ಮಕ ವಿಧಾನಗಳನ್ನು ಒಳಗೊಂಡಿದೆ. ಭಂಡಾರದ ಬಗ್ಗೆ ಐತಿಹ್ಯ, ಕತೆಗಳು, ಜನಪದ ಪುರಾಣ, ಹಾಡುಗಳು ಇರುವಂತೆ ಪೂಜೆ–ಜಾತ್ರೆ–ಉತ್ಸವ ಅನೇಕ ವಿಧಾನಗಳಲ್ಲಿ ಆಚರಣೆ–ಸಂಪ್ರದಾಯ–ನಂಬಿಕೆಗಳಿಂದ ಗುರುತಿಸಬಹುದಾಗಿದೆ. ನಂಬಿಕೆಗಳಲ್ಲಿ ಭಂಡಾರಕ್ಕೆ ಕೊಡುವ ವಿಶೇಷತೆಯನ್ನು ವೈಜ್ಞಾನಿಕ ಹಿನ್ನೆಲೆಯನ್ನು ಚರ್ಚಿಸುವುದರ ಮೂಲಕ ವಿವರಿಸಲಾಗಿದೆ. ಅಲ್ಲದೇ ವಿಭೂತಿ ಸಂಸ್ಕೃತಿ ಮತ್ತು ಭಂಡಾರ ಸಂಸ್ಕೃತಿಯ ಮಿಳಿತವನ್ನು ಮೂರನೇ ಅಧ್ಯಾಯನದಲ್ಲಿ ಚರ್ಚಿಸಲಾಗಿದೆ.

ಕುರುಬರ ಜನಾಂಗದ ಭಂಡಾರ ಸಂಸ್ಕೃತಿಯ ಮಹತ್ವವನ್ನು ನಾಲ್ಕನೇಯ ಅಧ್ಯಯದಲ್ಲಿ ವಿವರಣೆ ಕೊಡಲಾಗಿದೆ. ಭಂಡಾರದ ಉಪಯೋಗ, ಶುಭಕಾರ್ಯದಲ್ಲಿ ಭಂಡಾರ ಬಳಕೆ, ಗೋರವಯ್ಯನ ವೇಷಭೂಷಣದಲ್ಲಿ ಭಂಡಾರದ ಆಚರಣೆಯಲ್ಲಿ ತನ್ನದೇ ಆದ ಅನನ್ಯತೆಯನ್ನು ಉಳಿಸಿಕೊಂಡಿದೆ. ಅಲ್ಲದೇ ಕೆಲವು ವಿಧಿ ನಿಷೇಧಗಳಲ್ಲಿ ಭಂಡಾರದ ಸಾಂಸ್ಕೃತಿಕ ಮಹತ್ವವನ್ನು ಸಾಧ್ಯವಾದಷ್ಟು ಮಾಹಿತಿಯನ್ನು ಒದಗಿಸಲಾಗಿದೆ. ಐದನೆಯ ಅಧ್ಯಾಯ ಮೇಲಿನ ಎಲ್ಲಾ ಪ್ರಕರಣಗಳ ಸಾರಾಂಶವನ್ನು ಕ್ರೂಢೀಕರಿಸಿ ತಿಳಿಸುವುದೇ ಸಮಾರೋಪವಾಗಿದೆ.

ಶಿಷ್ಟ ಪುರಾಣಗಳ ಪರಿದಿಯೊಳಗೆ ಸೇರಿಕೊಂಡಿರುವ ಭಂಡಾರ ಸಂಸ್ಕೃತಿಯ ಜನಪದೀಯ ಮೂಲ ನೆಲೆಗಳನ್ನು ಆಚರಣೆಗಳ ಹಿನ್ನೆಲೆಯಲ್ಲಿ ಗುರುತಿಸುವುದು ಈ ಅಧ್ಯಯನದ ಒಂದು ಪ್ರಮುಖ ಪ್ರಯತ್ನವಾಗಿದೆ. ಭಂಡಾರದ ಕಾರಣಕರ್ತ ಒಡೆಯರ್ ಸಂಪ್ರದಾಯ ವಿಶಿಷ್ಟ ಕೇಂದ್ರ ವ್ಯಕ್ತಿಯಾಗಿದ್ದು, ಒಡೆಯರ ಭಂಡಾರ ಬಟ್ಟಲು ಪರಂಪರೆ ಅದಕ್ಕೆ ದೊರೆಯುವ ವಿಶಿಷ್ಟವಾದ ಸ್ಥಾನ–ಮಾನ ಭಂಡಾರದ ಪವಾಡದಲ್ಲಿ ಭವಿಷ್ಯವಾಣಿ ಜನರನ್ನು ಮುಗ್ದನಂಬಿಕೆಯತ್ತ ಸೆಳೆಯುವ ಪರಿ ಮತ್ತು ಔಷಧ ರೂಪವಾಗಿರುವ ವೈದ್ಯಕೀಯ ಗುಣಗಳಲ್ಲಿ ಭಂಡಾರದ ಪಾತ್ರವು ಒಟ್ಟು ಜೀವಂತವಾಗಿರುವ ಹಲವು ಪದರೊಳಗಿರುವ ವಿವಿಧ ರೀತಿಯ ಅಸ್ತಿತ್ವದಲ್ಲಿ ಭಂಡಾರವನ್ನೇ ಗುರುತಿಸಲಾಗಿದೆ.

ಕುರುಬರಲ್ಲದೇ ಸಮುದಾಯದವರು ತಮ್ಮನ್ನು ಭಂಡಾರ ಸಂಸ್ಕೃತಿಯಲ್ಲಿ ಸಮೀಕರಿಸಿಕೊಂಡಿರುವುದನ್ನು ಗುರುತಿಸಬಹುದಾಗಿದೆ. ಜಾತಿ ವ್ಯವಸ್ಥೆಯ ಸಮಾಜದಲ್ಲಿ ವಿಶಿಷ್ಟವಾಗಿ ಹಾಗೂ ವಿಭಿನ್ನವಾಗಿ ಕಂಡುಬರುವ ಭಂಡಾರ ಸಂಸ್ಕೃತಿಯಲ್ಲಿ ಜಾತಿಯ ಕಟ್ಟುಪಾಡುಗಳು ಮರೆಯಾಗಿ ಜಾತಿ–ಜಾತಿಗಳ ನಡುವಣ ಗೋಡೆಯೇ ಇಲ್ಲದಿರುವುದು ವಿಶೇಷ ಅಂಶವಾಗಿದೆ.

ಜಾಗತೀಕರಣದ ಸೆಳೆಯಲ್ಲಿ ಸಿಲುಕಿದ ಭಂಡಾರ ಸಂಸ್ಕೃತಿಯು ವಿಭೂತಿಯತ್ತ ಹೊರಳುತ್ತಿದೆ. ಭಂಡಾರ ಸಂಸ್ಕೃತಿ ಮತ್ತು ವಿಭೂತಿ ಸಂಸ್ಕೃತಿ ಎರಡನ್ನು ಕುರುಬ ಜನಾಂಗದವರು ಒಪ್ಪಿಕೊಂಡಿದ್ದಾರೆ. ಆದರೆ ಹಾಲುಮತ ದೈವಗಳ ಜಾತ್ರೆಯಿಂದ ಹಿಡಿದು ಜನಪದರ ಬದುಕಿನ ಜೀವನದಲ್ಲಿ ಭಂಡಾರಕ್ಕೆ ಹೆಚ್ಚಿನ ಪ್ರಾಶಸ್ತ್ಯ ಸ್ಥಾನವನ್ನು ಒಪ್ಪಿಕೊಂಡಿರುವುದು ಇಂದಿಗೂ ಒಂದು ಮಹತ್ವಪೂರ್ಣವಾದ ಸಂಗತಿಯಾಗಿದೆ. ಭಂಡಾರ ಸಂಪ್ರದಾಯವು ಇಂದಿನ ಸಮಾಜದಲ್ಲಿ ಪಡೆದಿರುವ ಸ್ಥಾನ ಅದು ಬಿಂಬಿಸುವ ಅನನ್ಯತೆ ಅದು ಪ್ರಕಟಗೊಳ್ಳಬೇಕಾದ ಅವಶ್ಯಕತೆ ಅದು ನೀಡುವ ಅರ್ಥ ಅದರ ಸಂಕೇತಗಳು ಬಳಕೆಯಾಗುತ್ತಿರುವ ವಿಧಾನಗಳು ಇವುಗಳನ್ನೆಲ್ಲಾ ಅರಿಯುವ ಪ್ರಯತ್ನ ಅಧ್ಯಯನದಲ್ಲಿ ಮಾಡಲಾಗಿದೆ.

ಕ್ಷೇತ್ರಕಾರ್ಯದಲ್ಲಿ 'ಸಂದರ್ಶನ ವಿಧಾನ'ವನ್ನು ಅನುಸರಿಸಲಾಗಿದೆ. ಸಂದರ್ಶನದ ಮೂಲಕ ವಕ್ತೃವಿನೊಡನೆ ಭಂಡಾರದ ಬಗ್ಗೆ ನೇರವಾಗಿ ಮಾಹಿತಿಯನ್ನು ಸಂಗ್ರಹಕಾರ್ಯ ವಿಧಾನವು ಬಹಳ ಪ್ರಮುಖವಾದುದು. ಜನಪದ ಸಂಸ್ಕೃತಿಯೊಂದು ರೂಪುಗೊಂಡಿದ್ದು ಜನರಿಂದಲೇ ಹಾಗಾಗಿ ಅಂತಹ ಜನಪದರ ಅಭಿಪ್ರಾಯ ಅನಿಸಿಕೆಗಳು ಅತ್ಯಂತ ಮಹತ್ವಪೂರ್ಣವಾದುದು. ಭಂಡಾರದ ಆಚರಣೆಯ ಬಗ್ಗೆ ಅವರ ನಂಬಿಕೆ, ಉತ್ಸಾಹ, ಬಯಕೆ, ಅನಿವಾರ್ಯತೆ ಇವೆಲ್ಲಾ ಕಾರಣಗಳನ್ನು ಅವರಿಂದಲೇ ತಿಳಿಯುವುದು ಮುಖ್ಯ. ಈ ಅಧ್ಯಯನದಲ್ಲಿ ಜನಪದರ ಅಭಿಪ್ರಾಯಗಳಿಗೆ ಪ್ರಾಮುಖ್ಯತೆಯನ್ನು ನೀಡಿ ಇಡೀ ಅಧ್ಯಯನಕ್ಕೆ ಒಂದು ಹೊಸ ದೃಷ್ಟಿಕೋನ ಒದಗಿಸಿದಂತಾಗಿದೆ.

ಭಂಡಾರ ಸಂಸ್ಕೃತಿಯು ನಿಂತ ನೀರಲ್ಲ ಅದು ನಿರಂತರ ಚಲನಶೀಲತೆಯನ್ನು ಹೊಂದಿದೆ. ಹಾಗೂ ಕೇವಲ ಕುರುಹಾಗಿ ಉಳಿಯದೇ ಇದು ಇಂದಿಗೂ ತನ್ನ ಪ್ರಸ್ತುತೆಯನ್ನು ಉಳಿಸಿಕೊಂಡಿದೆ. ತನ್ನ ಮೂಲ ನೆಲೆಯಲ್ಲಿ ಬದಲಾವಣೆಯಲ್ಲದೇ ಸದಾ ಪ್ರಯತ್ನಿಸುತ್ತಿರುವಂತೆ ಹಿರೇಮೈಲಾರ ಮತ್ತು ದೇವರಗುಡ್ಡ ಜಾತ್ರೆಗಳಲ್ಲಿ ತನ್ನನ್ನು ಉಳಿಸಿಕೊಂಡು ಬಂದಿರುವುದಕ್ಕೆ ಒಳ್ಳೆಯ ಉದಾಹರಣೆಯಾಗಿದೆ ಎಂಬುದನ್ನು ಈ ಅಧ್ಯಯನದಲ್ಲಿ ತೋರಿಸಿಕೊಟ್ಟಿದೆ.

# ಅನುಬಂಧಗಳು

೧. ಭಂಡಾರ ಕುರಿತು ಹಾಡುಗಳು
೨. ವಕ್ತೃಗಳ ವಿವರಗಳು
೩. ಛಾಯಾಚಿತ್ರಗಳು
೪. ಪರಾಮರ್ಶನ ಗ್ರಂಥಗಳು

# ಅನುಬಂಧಗಳು

## ೧. ಭಂಡಾರ ಕುರಿತು ಹಾಡುಗಳು

**೧. ಮೈಲಾರಲಿಂಗನ ಭಂಡಾರದ ಹಾಡು**

ಭಂಡಾರ ಇದು ಇದು ಬಂಗಾರ
ಭಗುತರಿಗೆ ಒಲಿವುದು ಭಂಡಾರ
ಸಿದ್ದರ ಇರುವುದ ಸಿಡಿನಾಳಾದ ಬಯಲಾಗ
ಗದ್ದರಿಸಿ ತುಡುಮ ಏ ಹೊಡೆದಾನ
ಗದ್ದರಿಸಿ ಏ ತುಡುಮ ಹೊಡೆದಾನ ಮೈಲಾರಲಿಂಗ ॥ಭಂಡಾರ ಇದು॥
ಚಿತ್ತಲೆ ಸವತರ ಏ ನೆರೆದಾರ
ಚಿತ್ತಲೆ ಸವಿತ ನರೆದಾರ ನನಸ್ವಾಮಿ
ಗಂಡರ ಇಲ್ಲೇನ ಏ ಇವರಿಗೆ
ಅತ್ತೇರು ಇವರಿಗೇವುಂಟು, ಮಾವರು ಇವರಿಗೆವುಂಟು
ಬಂದವರೆ ನನ್ನ ಏ ಗುಣದಿಂದ ॥ಭಂಡಾರ ಇದು॥
ಏನು ಹೇಳಲಿ ಮಾಳ, ನಿನಗೊಂದು ಒಳ ಮಾತು
ನಾಡಿಗೆ ನಾನು ಏ ಹೋಗತೇನ
ನಾಡ ಒಳ್ಳೆದೈತಂತ ಬಂದೇನ ಗಂಗಮಾಳ
ನಡುವಿನ ಭಕ್ತರು ಏ ಕರದಾರ ॥ಭಂಡಾರ ಇದು ॥
ಬಿಲ್ಲು ಬೆತ್ತವ ಕೊಡುನಾಗ, ವೀಣೆಯ ಕೊಡು
ಯುದ್ದಕ ನಾನು ಏ ಹೋಗಬೇಕು
ಯುದ್ದಕ ಹೋಗಬೇಕು ಗೆದ್ದರಾರ ಬರಬೇಕ
ಪವಾಡ ಮಾಡಿ ಏ ನಿಲ್ಲಬೇಕ ॥ಭಂಡಾರ ಇದು॥
ಮನಿಚೂಲ ಪರ್ವತ, ಹೊನ್ನತಿ ದೇವರ ಗುಡ್ಡ
ಗುಡ್ಡಾಪುರದಾಗ ಏ ನಡೆದೈತ
ಗುರುವಿನ ಏಸ್ಥಾನ ಹಿಂಗೈತಿ ಗಂಗಮಾಳ
ಬಟ್ಟಲೇ ಭಂಡಾರ ಏದರಸ್ತೇವ ॥ಭಂಡಾರ ಇದು॥
ಮಣಿಯ ಮಲ್ಲಾಸುರರು ಇಬ್ಬರು ಇರುವರ

ಯುದ್ದಕ ನಾನ ಏ ಹೋಗಬೇಕು

ಪಾರ್ವತಿ ಪರಮೇಶ್ವರ ನಂದಿಯ ಏರಿಕೊಂಡು ಭೂಲೋಕದಾ ಇಳಿದಾರ

ನಾನೇನು ಗಂಗಮಾಳ, ನೀನೇನು ಗುಡದಯ್ಯ

ಯುದ್ಧಕ್ಕೆ ನಾನು ಏ ಹೋಗಬೇಕು ॥ಭಂಡಾರ ಇದು॥

ಸೀಗೆಯ ಹುಣ್ಣಿವ್ಯಾಗ ಒಂಬತ್ತು ದಿನದಾಗ

ಕುದುರಿಯ ಹಬ್ಬದ ಏ ನಡೆದೈತ

ಮಣಿಕಾಸುರನನ್ನು ಶಿವನು ಗಂಗಮಾಳಮ್ಮ

ಮಲ್ಲಾಸುರನನ್ನು ಗುಡ್ಡದಯ್ಯ ಏ ತೆಗೆದಾನ ॥ಭಂಡಾರ ಇದು॥

ದೇವಾನು ದೇವಾತ್ಯರು ಪೂಜಕ ಕುಂತಾರ

ಲಿಂಗ ಪೂಜೇವ ಏ ನಡೆಸೇವ

ಎಡಕ್ಕೊಂದು ಬಲಕ್ಕೊಂದು ಶಿರವನ್ನು ಇಟ್ಟಾರ

ಲಿಂಗ ಪೂಜೇವ ಏ ನಡೆದೈತೆ ಮೈಲಾರಲಿಂಗ

ಯುದ್ದ ಮಾಡ್ಯಾನ ಏ ಮಣಿಚೂಲದಾಗ ॥ಭಂಡಾರ ಇದು॥

ಹೇಳಿಕೊಂಡ ಹೋದರ ಬೆಳತನಕ ಗುಡದಯ್ಯ

ಇಲ್ಲಿಗೆ ಈ ಸಂದ ಏ ಪದಮುಂದ

ದಾವಣಗೆರೆ ಜಿಲ್ಲೆದಾವ, ದಾವಣಗೇರಿ ತಾಲೂಕಿನವ

ದಾವಣಗೇರಿ ಶಿಬಾರದ ಏ ಗೋರವಯ್ಯ

ಭಂಡಾರ ಇದು ಬಂಗಾರ

ಭಗುತರಿಗೆ ಒಲಿಯುವುದು ಭಂಡಾರ

ಹಾಡಿದವರು

ಎಲ್ಲಪ್ಪ ಹತ್ತಿ ಮತ್ತೂರು
ಗೋರವಯ್ಯ
(ದಾವಣಗೆರೆ–ಕುರುಬರು)

## ೨. ಹುಲಿಗೆಮ್ಮನ ಭಂಡಾರದ ಹಾಡು

ಭಂಡಾರ ಎಂಬುದು ಬಲು ಸೋಜಿಗಾವ್ವ ತಂಗಿ
ಭಂಡಾರ ಅಲ್ಲ ಇದು ಬಂಧನವೇ
ಬಾ ನನ್ನ ತಾಯವ್ವ ಬಂಗಾರ ನೀಡೇನಾ
ಮಂಗಳಾರುತಿಯ ಬೇಳಿಗೇನೆ
ಮಂಗಳಾರುತಿ ಬೆಳಗೇನೇ ಕರಿಹುಲಗಾ
ರಂಗೇರಿ ಬರುವ ಹೇರವ್ವ ಸಾಕು
ಭಂಡಾರ ಎಂಬುದು ಬಲು ಸೋಜಿಗಾವ್ವ ತಂಗಿ
ಭಂಡಾರ ಅಲ್ಲ ಇದು ಬಂಧನವೇ
ಎದ್ದು ಬಾ ಹುಲಿಗೆವ್ವನಾ ಇದ್ದೇವು ನೋಡ್ಯಾನಾ
ಎದ್ದು ಕಾಲುಗಳ ಯೇ ಪದುಮವ
ಎದ್ದನೇ ಕಾಲುಗಳ ಪದುಮ ಪಾವನ ಗೆಜ್ಜೆ
ಮುದ್ದು ಶಂಕರನಾ ಏ ಮಗಳವ್ವ
ಭಂಡಾರ ಎಂಬುದು ಬಲುಸೋಜಿಗಾವ್ವ ತಂಗಿ
ಭಂಡಾರ ಎಂಬುದು ಬಂಧನವೇ
ಯಾಕವ್ವ ಕರಿಹುಲಗಾ ಕೋಪ ನನ್ನ ಮ್ಯಾಲೆ
ಮಾತಾಡವಲ್ಲೇ ಏ ನಗುವಲ್ಲೇ
ಮಾತಡವಲ್ಲೇ ಏ ನಗುವಲ್ಲೇ ಭಕುತರ ಮನೆಯ
ಬೇಕಿಲ್ಲವೇನೇ ಏ ಶಿವಪೂಜೆ
ಭಂಡಾರ ಎಂಬುದು ಬಲುಸೋಜಿಗಾವ್ವ ತಂಗಿ
ಭಂಡಾರ ಎಂಬುದು ಬಂಧನವೇ
ಬಿದ್ದ ಗದ್ದಿಗೆಯ ಮ್ಯಾಲೆ ಚುಚ್ಯಾರ ನಿಂಬೆಯಣ್ಣ
ಎತ್ತಲೋಲ್ಲೇ ಹುಲಿಗೆಮ್ಮ ನಿನಗ್ಯಾರು
ಎತ್ತಲೇ ಹುಲಿಗೆಮ್ಮ ನಿನಗ್ಯಾರು

ಬಿದ್ದ ಬೀದ್ಯಾಗ ಏ ಮದುಮಗಳಾ
ಭಂಡಾರ ಎಂಬುದು ಬಲು ಸೋಜಿಗಾವ್ವ ತಂಗಿ
ಭಂಡಾರ ಎಂಬುದು ಬಂಧನವೇ
ಅರಿಶಿನದ ಸಿರ್ಯಾವ್ವ ದರುಶನದ ಕೊರಳವ್ವ
ಪರುಶುರಾಮನಾ ಅಡೆವವ್ವ ಕರಿಹುಲಗಾ
ಪರಿಸೆದ್ದು ಕೈ ಮುಗಿದ್ಯಾವು ಕರಿಹುಲಗಾ
ಭಂಡಾರ ಇದು ಬಲು ಸೋಜಿಗಾವ್ವ ತಂಗಿ
ಭಂಡಾರ ಅಲ್ಲ ಇದು ಬಂಧನವೇ
ತಾಯವ್ವಗೆ ಹೋಗುವ ಸಡಗರಾ
ಕರಿಯನ ಸೀರ್ಯಾವ್ವ ಮುರಿಗಿನ ಬಳೆಯವ್ವ
ತಿರುಗೊಮ್ಮೆ ನೋಡವ್ವ ಅಡೆದವ್ವ ಮುನಿರಾಬಾದ್
ಎರೆಯಾಗ ನಿನ್ನ ಗುರುತು ಹಿಡಿದೇನಾ
ಭಂಡಾರ ಇದು ಬಲು ಸೋಜಿಗಾವ್ವ ತಂಗಿ
ಭಂಡಾರ ಇದು ಬಂಧನವೇ
ಕೆಂಪಿನಾ ಸೀರ್ಯಾವ್ವ ವಹಿನಾ ಬಳೆಯವ್ವ
ನಿಂತವೊಮ್ಮೆ ನೋಡೆ ಅಡೆದವ್ವ ಮುನಿರಾಬಾದ್
ಬೆಂಚ್ಯಾಗ ನಿನ್ನ ಗುರುತು ಹಿಡಿದ್ಯಾನ ಕರಿಹುಲಗ
ಭಂಡಾರ ಎಂಬುದು ಬಲಿಸೋಜಿಗಾವ್ವ ತಂಗಿ
ಭಂಡಾರ ಎಂಬುದು ಬಂಧನವೇ

ಹಾಡಿದವರು
ಬಸನಾಳ ಚಂದ್ರಮ್ಮ
ದಾವಣಗೆರೆ
(ಜೋಗತಿ)

## ೩. ಗಂಗಿ ಮಾಳಮ್ಮನ ಸಂಧಿ

ಗಂಗಿ ಮಾಳವ್ವ ನಿನ್ನ ಗಂಡನ ಒಲಿವುದರ
ಭಂಡಾರ ಚೀಲ।ಏ। ಬಲಗೈ
ಬಾ ನನ್ನ ಮಾ ಗುರುವೇ ॥
ಭಂಡಾರ ಚೀಲ ।ಏ। ಬಲಗೈ
ಬಾ ನನ್ನ ಮಾ ಗುರುವೇ ॥ಮು॥ ॥ಹಿ॥
ಆ ಭಂಡಾರದ ಚೀಲ ಬಲಗೈಯ ಹಿಡಕೊಂಡು
ಅಂಡೆ ಕುರುವತ್ತಿನ ।ಏ। ತರಲೋದ
ಬಾ ನನ್ನ ಮಾ ಗುರುವೆ ॥ಹಿ।
ಆ ಶರಣೆಂಬೆ ಗಂಗವ್ವಗೆ
ಶರಣೆಂಬೆ ಲಿಂಗಯ್ಯಗೆ
ಶರಣೆಂಬೆ ನಮ್ಮ ।ಏ। ಗುರುವಿಗೆ
ಬಾ ನನ್ನ ಮಾಗುರುವೆ ॥ಮು॥ ॥ಹಿ॥
ಆ ಶಿವಗಂಗಿ ಮಾಳಮ್ಮ
ಶಿವಗ ಭೋಜನ ಮಾಡಿ
ಎಡೆ ಮಾಡಿ ಶಿವನ ।ಏ। ಕರುದಾಳ
ಬಾ ನನ್ನ ಮಾ ಗುರುವೆ ॥ಮು॥ ॥ಹಿ॥
ಆ ಎಡೆಮಾಡಿ ಶಿವನನ್ನು
ಕರುದಾಳೆ ಮಲ್ಲಯ್ಯ
ಗಂಗಿ ಭಂಡಾರ ।ಏ। ತೋರಂದಾ
ಬಾ ನನ್ನ ಮಾ ಗುರುವೆ॥ಮು॥ ॥ಹಿ॥
ಆ ಪಂಥವೂ ಬಂದಾಗ
ಎಂತಾರನ ಬಿಡದಿಲ್ಲ
ಟೊಂಕಬಾಗಿದ ।ಏ। ಮುದಕೀನ
ಬಾ ನನ್ನ ಮಾ ಗುರುವೆ॥ಮು॥ ॥ಹಿ॥
ಟೊಂಕನೇ ಬಾಗಿದ
ಮುದುಕಿನ ಹೇಳಕಳಿಸಿ
ಭಂಡಾರ ಚೀಲ ।ಏ। ಹೊರಿಸ್ಯಾನ
ಬಾ ನನ್ನ ಮಾ ಗುರುವೆ ॥ಮು॥ ॥ಹಿ॥
ರಾಣೀಯ ಬೆನ್ನೂರು
ಓಣೆಲ್ಲಿ ಮಲ್ಲಿಗೆ

ರಾಣಿ ಶೀಲವಂತಿ ।ಏ। ಮನಿಗೋದ
ಬಾ ನನ್ನ ಮಾ ಗುರುವೆ ॥ಹಿ॥
ಆ ರಾಣಿ ಶೀಲವಂತೆ
ಮನಿಗೋದ ಮಲ್ಲಯ್ಯ
ಭಂಡಾರ ನಾಗಿ ।ಏ। ಸುಳಿದಾನ
ಬಾ ನನ್ನ ಮಾ ಗುರುವೆ ।ಹಿ।
ಆ ಸ್ವಾಮೀಯ ಕರ್ತೂಕ
ಕೇಳಿದಂತ ಭಕ್ತರಿಗೆ
ಮಾಡಿದ ।ಏ। ಪಾಪ ಪರಿಹಾರ
ಬಾ ನನ್ನ ಮಾ ಗುರುವೆ ॥ಮು॥ ॥ಹಿ॥
ಮೈಲಾರಲಿಂಗನ ಕಾವ್ಯ

ಸಂಪಾದಕರು
ಡಾ.ಮಂಜುನಾಥ ಬೇವಿನಕಟ್ಟಿ

## ೨. ವಕ್ತೃ ವಿವರಗಳು

| ಕ್ರ.ಸಂ.ಹೆಸರು | ವಯಸ್ಸು | ವೃತ್ತಿ | ಊರು |
|---|---|---|---|
| ೧. ಎಲ್ಲಪ್ಪ ಹತ್ತಿ ಮತ್ತೂರು | ೫೧ | ಪವಾಡದ ಗೊರವಯ್ಯ | ದಾವಣಗೆರೆ |
| ೨. ತಿಪ್ಪೇಸ್ವಾಮಿ | ೩೮ | ವ್ಯವಸ್ಥಾಪಕ | ದಾವಣಗೆರೆ |
| ೩. ಗುಡ್ಡಪ್ಪ | ೫೨ | ಗೋರವಯ್ಯ | ದಾವಣಗೆರೆ |
| ೪. ಶ್ರೀರಾಮಪ್ಪಜ್ಜ | ೫೨ | ಕಾರ್ನಿಕ ನುಡಿಯುವ | ಹೂ. ಹಡಗಲಿ |
| | | ಗೋರವಯ್ಯ | ಬಳ್ಳಾರಿ (ಜಿ) |
| ೫. ಸತ್ಯನಾರಾಯಣ | ೫೫ | ಅರ್ಚಕರು | ಹುಲಿಗಿ ಕ್ಷೇತ್ರ |
| ಬೇವಿನಭಟ್ ದೋಣ್ನಿ | | | (ಮುನಿರಾಬಾದ್) ಹೊಸಪೇಟೆ |
| ೬. ಮನೋಹರ | ೪೫ | ಕರಡಿ ಗೋರವ್ವ | ದಾವಣಗೆರೆ |
| ೭. ಬಸವನಾಳ್ ಚಂದ್ರಮ್ಮ | ೬೦ | ಜೋಗತಿ | ದಾವಣಗೆರೆ |
| ೮. ಮಲ್ಲಿಕಪ್ಪ | ೬೦ | ಗೋರವಯ್ಯ | ದಾವಣಗೆರೆ |
| ೯. ಸೋಮಮ್ಮ | ೫೮ | ಗೋರವಿ | ದಾವಣಗೆರೆ |



ಹಿರೇಮೈಲಾರ ಭಂಡಾರದ ರಾಶಿ ಪೂಜೆ



ಹುಲಿಗೆಮ್ಮದೇವಿ

2




ಭಂಡಾರಷಷ್ಠಿ ಶುಭದಿನದಂದು ಶ್ರೀ ಗುರುಗಳು ಪ್ರಧಾನ ಅರ್ಚಕರು
ಶ್ರೀ ಮೈಲಾರ ಸ್ವಯಂಭೋಲಿಂಗಪ್ಪನಿಗೆ ಭಂಡಾರ ಅರ್ಚನೆ ಮಾಡಿದ
ನಂತರ ಮೂಲ ಭಂಡಾರ ಬಟ್ಟಲನ್ನು ಶ್ರೀ ಸನ್ನಿಧಿಯಲ್ಲಿ ಇಟ್ಟಿರುವುದು.

3



೨



ಮಹಾರಾಷ್ಟ್ರದ – ಶ್ರೀ ಖಂಡೋಬಾ ಸ್ವಾಮಿ

೬



# ಪ್ರಾಚೀನಾ ಕಾಲದ ಭಂಡಾರದ ಬಟ್ಟಲು-ಮೈಲಾರ



ಶ್ರೀ ಮೈಲಾರ ಲಿಂಗೇಶ್ವರ
ಕ್ಷೇತ್ರದಲ್ಲಿ ಅಭಿಷೇಕ ನಂತರ
ಕಂಗೊಳಿಸುತ್ತಿರುವ ಸ್ವಾಮಿ



ಕುರುಬರ ಮನೆಯ ಭಂಡಾರ
ಸಿದ್ಧತೆ(ತಯಾರಿಕೆ)-ದಾವಣಗೆರೆ




ಭಂಡಾರ ಬಟ್ಟಲನ್ನು ಹಿಡಿದಿದ್ದಾರೆ



ಶ್ರೀ ಗುರು ಶಿಷ್ಯರಿಂದ ಶಸ್ತ್ರಪವಾಡದಲ್ಲಿ "ಆರತಿ ಪವಾಡ" ಮಾಡುತ್ತಿರುವುದು.

ಭಂಡಾರವನ್ನು ಹಣೆಗೆ ಮತ್ತು ಕೆನ್ನೆಗೆ ಹಚ್ಚಿಕೊಂಡಿದ್ದಾರೆ



"ಶಸ್ತ್ರ ಪವಾಡದ ಆಯುಧಗಳು" ಕರೀಕಂಬಳಿ ಗದ್ಧಿಗೆಯ ಮೇಲೆ ಮಿಣಿ ಹಗ್ಗ, ಬಗಣಿಗೂಟಗಳು, ಖಡ್ಗಗಳು, ತ್ರಿಶೂಲ, ಕಾರೇಮುಳ್ಳು, ಕರೀಕಂಬಳಿ ಗದ್ಧಿಗೆ, ಪೂಜಾ ಸಾಮಗ್ರಿಗಳು.

ಭಂಡಾರದಿಂದ ಪೂಜೆಯನ್ನು ಮಾಡಲಾಗಿದೆ



ಬಗಣಿಗೂಟ ಪವಾಡಕ್ಕೆ ಬಳಸಿಕೊಳ್ಳುವ "ಮಿಣಿಹಗ್ಗ" ಚರ್ಮದಿಂದ ಮಾಡಿರುವುದು.

ಮತ್ತು ಭಂಡಾರದಿಂದ ಪೂಜೆ



ಕಂಚವೀರ-ಗೊರವರಿಂದ "ಬಗಣಿ ಗೂಟದ ಪವಾಡ"
ಶ್ರೀ ಗುರುಗಳ ಆಶೀರ್ವಾದದ ನಂತರ ಭಂಡಾರ ಹಾಕುವುದು.



ಶ್ರೀ ಮೈಲಾರಲಿಂಗೇಶ್ವರ ಸ್ವಾಮಿಯ ಪಾದುಕೆಗಳು

## ಶ್ರೀ ಮೈಲಾರಲಿಂಗೇಶ್ವರ ಸ್ವಾಮಿಯ ಪಾದುಕೆಗಳಿಗೆ ಭಂಡಾರ ಪೂಜೆ

ಸದ್ಕ್ ಲೇ............................ಮೌನ



Sri Audio video ph: 0837326038

"ಕಾರ್ಣೀಕೋತ್ಸವ" ನುಡಿಯುವ ದೃಶ್ಯ ಶ್ರೀಗುರುಗಳ ಆಶೀರ್ವಾದದ ನಂತರ ಕಾರ್ಣೀಕದ ನುಡಿಯನ್ನು ಬಿಲ್ಲುಹತ್ತಿ ನುಡಿಯುತ್ತಿರುವ ಗೊರವಯ್ಯ.



ಭಂಡಾರ ಹಚ್ಚಿಕೊಂಡಿರುವ ಗೊರವಯ್ಯರು

## ೪. ಪರಾಮರ್ಶನ ಗ್ರಂಥಗಳು


೧. ಅಂಗಡಿ ಎಸ್.ಎಸ್., (೨೦೦೯), ಕುರುಬರ ಸಮುದಾಯ ಭಾಷೆ, ಮಾನವಭಾಷಾಶಾಸ್ತ್ರ ಅಧ್ಯಯನ ಆನಂದಕಂದ ಗ್ರಂಥಮಾಲೆ, ಮಲ್ಲಾಡಹಳ್ಳಿ, ಚಿತ್ರದುರ್ಗ ಜಿಲ್ಲೆ.೧

೨. ಅಂಗಡಿ ಎಸ್.ಎಸ್., (೨೦೧೫), ಕ್ಷೇತ್ರಕಾರ್ಯ ವಿಶಾಲಾಕ್ಷಿ ಪ್ರಕಾಶಕರು, ಬೆಳಗಾವಿ

೩. ಅನ್ನಪೂರ್ಣ ಗೋಸ್ಬಾಳ, (೨೦೧೪), ಹಾಲುಮತ ಕಿರಣ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೪. ಕಲಬುರ್ಗಿ ಎಂ.ಎಂ., (೨೦೧೦) ಮಾರ್ಗ: ಸಂಪುಟ.೨ ಸಪ್ನ ಬುಕ್‌ಹೌಸ್, ಬೆಂಗಳೂರು

೫. ಕಲಾಭೂಷಣ ಯೋಗ ನರಸಿಂಹ, (೨೦೧೩), ಮೈಲಾರ ಜ್ಯೋತಿ ಮಹಾದರ್ಶನ, ಪ್ರಕಾಶನ ಕಲರ್ ಶೇಡ್ಸ್, ಬೆಂಗಳೂರು

೬. ಕೃಷ್ಣವೇಣಿ, (೨೦೦೮) ಹುಲಿಗೆಮ್ಮ ಅಂಬಾರಿ ಪ್ರಕಾಶನ, ಮೈಸೂರು

೭. ತಳವಾರ ವಾಮದೇವ, (೨೦೧೦), ಮಧ್ಯ ಕರ್ನಾಟಕದ ಗ್ರಾಮದೇವತೆಗಳ ಸಂಕಥನ, ಕಲಾ ಪ್ರಕಾಶನ, ಬೆಂಗಳೂರು

೮. ನೇಗಿನಹಾಳ ಎಂ.ಬಿ., (೧೯೯೨), ಮೈಲಾರ ಮತ್ತು ಖಂಡೋಬಾ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೯. ನೇಗಿನಹಾಳ ಎಂ.ಬಿ., (೧೯೯೯), ನೇಗಿನಹಾಳ ಪ್ರಬಂಧಗಳು(೧೯೯೯), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೦. ಮಂಜುನಾಥ ಬೇವಿನಕಟ್ಟಿ, (೧೯೯೯) ಮೈಲಾರ ಲಿಂಗನ ಕಾವ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೧. ಲಿಂಗದಹಳ್ಳಿ ಹಾಲಪ್ಪ, (೨೦೧೪), ಹಾಲುಮತ ಸಾಂಸ್ಕೃತಿಕ ಪದಕೋಶ, ಸಂಪುಟ.೧ ಹಾಲುಮತ ಸಂಸ್ಕೃತಿ ಸಂಶೋಧನ ಪ್ರತಿಷ್ಠಾನ, ಹೊಸಪೇಟೆ

೧೨. ವಿಜಯಶ್ರೀ ಇಟ್ಟಣ್ಣನವರ, (೨೦೧೪), ಕಂಬಳಿ ಸಾಂಸ್ಕೃತಿಕ ಅಧ್ಯಯನ ವಿಕಾಸ ಪ್ರಕಾಶನ, ಹೊಸಪೇಟೆ

೧೩. ವೀರಣ್ಣ ದಂಡೆ, (೨೦೧೩), ಜನಪದ ಹಾಲುಮತ ಮಹಾಕಾವ್ಯ, ಸಾಗರ್ ಪ್ರಕಾಶನ, ಬೆಂಗಳೂರು

೧೪. ವೆಂಕಟೇಶ ಎಂ.ಎನ್., (೧೯೯೮), ಮೈಲಾರದ ಜಾತ್ರೆಗಳು ಪ್ರದರ್ಶನ ಅಧ್ಯಯನ, ಅಭಿ-ಆದರ್ಶ ಪ್ರಕಾಶನ, ಭದ್ರಾವತಿ

೧೫. ಕೃಷ್ಣಪ್ಪ, (೨೦೦೮), ಶ್ರೀಮೈಲಾರ ಲಿಂಗೇಶ್ವರ ದಿವ್ಯ ಚರಿತಾಮೃತ, ಅಪ್‌ಸೆಟ್ ಪ್ರಿಂಟರ್ಸ್, ದಾವಣಗೆರೆ

೧೬. ಹಳ್ಳಿಕೇರಿ ಎಫ್.ಟಿ. (ಸಂ), (೨೦೦೯), ಹಾಲುಮತ ವ್ಯಾಸಂಗ, ಸಂಪುಟ.೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೭. ಹಳ್ಳಿಕೇರಿ ಎಫ್.ಟಿ. (ಸಂ), (೨೦೧೧), ಹಾಲುಮತ ವ್ಯಾಸಂಗ, ಸಂಪುಟ.೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೮. ಹಳ್ಳಿಕೇರಿ ಎಫ್.ಟಿ. (ಸಂ), (೨೦೧೩), ಹಾಲುಮತ ವ್ಯಾಸಂಗ ಸಂಪುಟ.೪ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೧೯. ಹಳ್ಳಿಕೇರಿ ಎಫ್.ಟಿ. (ಸಂ), (೨೦೧೫), ಹಾಲುಮತ ವ್ಯಾಸಂಗ ಸಂಪುಟ.೬ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ನಿಘಂಟು**

೧. ಕನ್ನಡ–ನಿಘಂಟು, (೧೯೯೩), ಸಂಪುಟ.೭, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

